# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ

# Karnataka Scout & Guide

## News Magazine

VOL. - 6 SEPTEMBER - 2006 No. - 08



Dr. **A.P.J. Abdul Kalam,** His Excellency the President of India, presenting the " National Best Teacher Award " to Sri J.M. Sharanaiah, H.M. & Scout Master, Govt. Primary School, Kalledevarapura, Davangere Dist. on 5-9-06 at New Delhi.



Sri **Basavaraj Horatti,** Hon'ble Minister for Primary & Secondary Education, Presenting the Sheild to the Scouts on 15th August 2006, at Chitradurga.



Sri **H.D. Revanna,** Hon'ble Minister for Public Work & Energy felicitating the President Scouts and Guides on 15th Aug 2006 at Hassan. Mrs. Bhavani Revanna Sri H.S. Prakash M.L.A., Sri K.H. Aswathnarayan Gowda, D.C. Sri Panduranga Rane, S.P. and Awardess are also seen.



Sri **Shashikanth A. Nayak** Hon'ble Minister for Horticulture Presenting the Sheild to the Scouts on 15th Aug 2006, at Belgaum.




Sri **M.K Pattan Setty** M.L.A. Badami, addressing at the Valedictory Function (Basic Course) Sri **S.R. Patil** M.L.C. and the President Bagalkote Dist. Assn. & Sri **S.R. Manahalli** D.D.P.I. & D.C.C. are also seen





ಗುಲ್ಬರ್ಗಾದಲ್ಲಿ ನಡೆದ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು

ಗುಲ್ಬರ್ಗಾದಲ್ಲಿ ನಡೆದ ರಾಜೀವಗಾಂಧಿ
"ಅಕ್ಷಯ್ ಊರ್ಜಾ ದಿವಸ್"
ಆಚರಣೆ ಸಂದರ್ಭದಲ್ಲಿ ಜಿಲ್ಲಾಧಿಕಾರಿಗಳಾದ
ಶ್ರೀ ಪಂಕಜ್ ಕುಮಾರ್ ಪಾಂಡೆಯವರು
ಗೈಡ್‌ಗೆ ಸಸಿಯೊಂದನ್ನು ನೀಡುತ್ತಿರುವುದು.
ಜಿಲ್ಲಾ ಸಹಕಾರ್ಯದರ್ಶಿ ಶ್ರೀ ಎಂ. ಗೋಪಾಲರಾವ್
ಚಿತ್ರದಲ್ಲಿದ್ದಾರೆ.



ಚಿತ್ರದುರ್ಗ ಜಿಲ್ಲೆ ಹಿರಿಯೂರಿನಲ್ಲಿ ಸ್ಕೌಟ್ಸ್ ಹಾಗು
ಗೈಡ್ಸ್‌ಗಳಿಗೆ ಸಮವಸ್ತ್ರ ನೀಡುವ ಕಾರ್ಯಕ್ರಮದಲ್ಲಿ
ತಾಲ್ಲೂಕು ಪಂಚಾಯಿತಿ ಅಧ್ಯಕ್ಷ
ಶ್ರೀ ರಂಗಸ್ವಾಮಿ ಮತ್ತು ಪುರಸಭೆ ಅಧ್ಯಕ್ಷ
ಶ್ರೀ ಎ. ಮಂಜುನಾಥ್,
ಶ್ರೀ ಮಹಮದ್ ಮೊಯಿನುದೀನ್
ಚಿತ್ರದುರ್ಗದ ಹಿಂದಿನ ಜಿಲ್ಲಾ ಕಾರ್ಯದರ್ಶಿ
ಮತ್ತಿತರರನ್ನು ಕಾಣಬಹುದು.





ಮೈಸೂರು ಜಿಲ್ಲೆ ಏರ್ಪಡಿಸಿದ್ದ ದ್ವಿತೀಯ ಸೋಪಾನ ತರಬೇತಿ ಶಿಬಿರದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು.





**Vol - 6** **September - 2006** **No. 8**




## ಪರಿವಿಡಿ



**ಕರ್ನಾಟಕ ಸ್ಕೌಟ್ಸ್ / ಗೈಡ್ಸ್ ವಾರ್ತಾ ಪತ್ರಿಕೆಗೆ ಚಂದಾದಾರರಾಗಿ**
**ಚಳವಳಿಯ ಬೆಳವಣಿಗೆಗೆ ಪ್ರೋತ್ಸಾಹಿಸಿರಿ**

**ವಾರ್ಷಿಕ ಚಂದಾ ರೂ. 30-00 ರೂಪಾಯಿಗಳು**
**ಶಾಲೆಗಳು ಹಾಗೂ ಸಂಘ - ಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100-00 ರೂಪಾಯಿಗಳು**

# ರಾಜ್ಯ ಮುಖ್ಯ ಆಯುಕ್ತರ ನುಡಿ.......................

**ಮಾನ್ಯರೆ**

ಸ್ಕೌಟ್ ಚಳವಳಿ 99 ವಸಂತಗಳನ್ನು ಮುಗಿಸಿ ಶತಮಾನೋತ್ಸವಕ್ಕೆ ಈ ತಿಂಗಳಲ್ಲಿ ಕಾಲಿಟ್ಟಿದೆ. ಇದು ಚಳವಳಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ನಮಗೆಲ್ಲಾ ಹೆಮ್ಮೆ ಹಾಗೂ ಸಂತಸದ ಸಂಗತಿ. ಪ್ರಪಂಚದ ಇತಿಹಾಸದಲ್ಲಿ ಒಂದು ಯುವ ಚಳವಳಿ 216 ರಾಷ್ಟ್ರಗಳಲ್ಲಿ 3 ಕೋಟಿಗೂ ಮಿಕ್ಕಿ ಯುವಜನತೆಯನ್ನು ತನ್ನ ಉದಾತ ತತ್ವ-ಧ್ಯೇಯಗಳತ್ತ ಸೆಳೆದಿದ್ದು ಸ್ಕೌಟಿಂಗ್-ಗೈಡಿಂಗ್ ಬಿಟ್ಟರೆ ಮತ್ತೊಂದಿಲ್ಲ. ಇದನ್ನು ಬಲಿಷ್ಠಗೊಳಿಸಿ ಯುವಶಕ್ತಿಯನ್ನು ಉತ್ತಮ ಮೌಲ್ಯ ಹಾಗೂ ಸದೃಢತೆಯೆಡೆಗೆ ಕೊಂಡೊಯ್ಯುವ ಕೆಲಸವನ್ನು ನಾವುಗಳು ಮಾಡಬೇಕಿದೆ.

ನಮ್ಮ ರಾಜ್ಯದಿಂದ ಇಂಗ್ಲೆಂಡ್‌ನಲ್ಲಿ 2007 ಆಗಸ್ಟ್‌ನಲ್ಲಿ ಜರಗುವ ಶತಮಾನೋತ್ಸವ ಸ್ಕೌಟ್ ಜಾಂಬೋರಿಗೆ 148ಕ್ಕೂ ಹೆಚ್ಚು ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದ್ದು, ಈಗಾಗಲೇ ರಾಷ್ಟ್ರೀಯ ಕಾರ್ಯಾಲಯಕ್ಕೆ ಕಳುಹಿಸಲಾಗಿದೆ. ನನಗೆ ತಿಳಿದಿರುವಂತೆ, ಕರ್ನಾಟಕದಿಂದ ಇದುವರೆವಿಗೆ ನಡೆದಿರುವ ಹೊರ ರಾಷ್ಟ್ರಗಳ ಅಂತರಾಷ್ಟ್ರೀಯ ಕಾರ್ಯಕ್ರಮಕ್ಕೆ ಹೋಗಬಯಸಿರುವ ಅತಿ ದೊಡ್ಡ ಸಂಖ್ಯೆ ಇದಾಗಿದೆ. ಎಲ್ಲಾ ಜಿಲ್ಲಾ ಸಂಸ್ಥೆಗಳಿಗೆ, ಪದಾಧಿಕಾರಿಗಳಿಗೆ ಹಾಗೂ ಅಭ್ಯರ್ಥಿಗಳಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು.

**ಸ್ಕೌಟ್ ಶತಮಾನೋತ್ಸವ ವರ್ಷದಲ್ಲಿ ಮತ್ತೊಂದು ಮೈಲಿಗಲ್ಲು** - ದಿನಾಂಕ 7 ರಿಂದ 17 ಸೆಪ್ಟೆಂಬರ್‌ವರೆಗೆ ಬೆಳಗಾಂ ಜಿಲ್ಲೆ - ಬೈಲಹೊಂಗಲ ಸ್ಥಳೀಯ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ, ಬೈಲಹೊಂಗಲ ಇವರುಗಳು ಶ್ರೀಕ್ಷೇತ್ರ ಸೊಗಲದಲ್ಲಿ ಏರ್ಪಡಿಸಿದ್ದ ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್ಸ್, ಫ್ಲಾಕ್ ಲೀಡರ್ಸ್, ಕಬ್ ಮಾಸ್ಟರ್ಸ್‌ಗಳ ಮೂಲ ತರಬೇತಿ ಶಿಬಿರಗಳು. ಈ ಶಿಬಿರದಲ್ಲಿ ಗೈಡ್ ಮತ್ತು ಪ್ಲಾಕ್ ವಿಭಾಗಕ್ಕೆ 95 ಅಭ್ಯರ್ಥಿಗಳು ಹಾಗೂ ಸ್ಕೌಟ್ ಮತ್ತು ಕಬ್ ವಿಭಾಗಕ್ಕೆ 196 ಅಭ್ಯರ್ಥಿಗಳು ಹಾಜರಾಗಿ 10 ದಿವಸಗಳ ಸ್ಕೌಟ್-ಗೈಡ್ ಶಿಕ್ಷಣ ಪಡೆದು ಸ್ಥಳೀಯ, ಜಿಲ್ಲಾ ಹಾಗೂ ರಾಜ್ಯ ಸಂಸ್ಥೆಯ **ಒಂಬತ್ತು ದಶಕಗಳ** ಇತಿಹಾಸದಲ್ಲಿ ದಾಖಲೆ ನಿರ್ಮಿಸಿರುತ್ತಾರೆ. ನಾನು ದಿನಾಂಕ 16 ರಂದು ಜರುಗಿದ ಮುಕ್ತಾಯ ಸಮಾರಂಭದಲ್ಲಿ ಖಭಾಗವಹಿಸಿ ರಾಜ್ಯ ಸಂಸ್ಥೆಯ ಪರವಾಗಿ ಹೃತ್ಪೂರ್ವಕ ಅಭಿನಂದನೆ ಸಲ್ಲಿಸಿದ್ದೇನೆ. ಈ ಬೃಹತ್ ಪ್ರಮಾಣದ ತರಬೇತಿ ಏರ್ಪಡಿಸಲು ಕಾರಣಕರ್ತರಾದ ಬೈಲಹೊಂಗಲ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಡಿ.ಎಂ. ದಾಸಪ್ಪ ಗೋಳ್ ಹಾಗೂ ಇಲಾಖೆಯ ಎಲ್ಲ ಅಧಿಕಾರಿ ವರ್ಗದವರನ್ನು ಹಾಗೂ ಸ್ಥಳೀಯ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಹಾಗೂ ಕಾರ್ಯಕರ್ತರುಗಳನ್ನು ಅಭಿನಂದಿಸಿ ಧನ್ಯವಾದ ಸಮರ್ಪಿಸಿದ್ದೇನೆ. ಬಹಳ ಮಟ್ಟಿಗೆ ರಾಷ್ಟ್ರದ ಯಾವುದೇ ರಾಜ್ಯದಲ್ಲಿ ಒಂದೇ ತಾಲ್ಲೂಕಿನಲ್ಲಿ 291 ಅಭ್ಯರ್ಥಿಗಳು ಸ್ಕೌಟ್-ಗೈಡ್ ಮೂಲ ತರಬೇತಿ ಪಡೆದ ಮತ್ತೊಂದು ನಿದರ್ಶನ ಇದುವರೆಗೆ ನನ್ನ ಗಮನಕ್ಕೆ ಬಂದಿಲ್ಲ. ಇದು ನಿಜಕ್ಕೂ ನಮಗೆಲ್ಲಾ ಹೆಮ್ಮೆ ಹಾಗೂ ಅಭಿಮಾನದ ವಿಷಯ. ತರಬೇತಿಯ ಯಶಸ್ಸಿಗೆ ಕಾರಣಕರ್ತರಾದ ಎಲ್ಲಾ ನಾಯಕರುಗಳಿಗೂ, ಸಹಾಯಕರುಗಳಿಗೂ, ತರಬೇತಿ ಯಶಸ್ಸಿಗೆ ಸಹಕರಿಸಿದ ಸನ್ಮಾನ್ಯ ಶಾಸಕರುಗಳಿಗೆ, ಬೆಳಗಾಂ ಜಿಲ್ಲಾ ಪರಿಷತ್‌ಗೆ, ವಿವಿಧ ಇಲಾಖೆಗಳ ಅಧಿಕಾರಿಗಳಿಗೆ, ಸಾರ್ವಜನಿಕರುಗಳಿಗೆ, ಸಂಸ್ಥೆಯ ಅಭಿಮಾನಿಗಳಿಗೆ ಹಾಗೂ ಕಾರ್ಯಕರ್ತರುಗಳಿಗೆ ನನ್ನ ಹೃತ್ಪೂರ್ವಕ ನಮನಗಳು. ಮುಂದಿನ ಸಂಚಿಕೆಯಲ್ಲಿ ಸಚಿತ್ರ ವರದಿ ಪ್ರಕಟಿಸಲಾಗುವುದು.

ವರ್ಷದ ಆರು ತಿಂಗಳು ಮುಗಿಯುತ್ತಾ ಬಂದಿದೆ. ಇನ್ನೂ ಹಲವು ಜಿಲ್ಲೆಗಳಲ್ಲಿ ಮೂಲ ತರಬೇತಿ ಶಿಬಿರಗಳು ಏರ್ಪಡದಿರುವುದು ನನ್ನ ಗಮನಕ್ಕೆ ಬಂದಿವೆ. ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳಿಗೆ, ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳಿಗೆ ಹಾಗೂ ಸ್ಕೌಟ್-ಗೈಡ್ ಶಿಕ್ಷಣ ಪ್ರೇಮಿಗಳಿಗೆ-ನನ್ನ ಮನವಿ-ಮುಂದಿನ ಮೂರು ತಿಂಗಳೊಳಗಾಗಿ

ತರಬೇತಿ ಶಿಬಿರಗಳನ್ನು ಏರ್ಪಡಿಸಿ ಶಿಕ್ಷಕ-ಶಿಕ್ಷಕಿಯರಿಗೆ ತರಬೇತಿ ನೀಡುವ ಮೂಲಕ ಚಳವಳಿ ಬೆಳಸಲು ಸಂಬಂಧಪಟ್ಟ ಎಲ್ಲರಲ್ಲಿ ಪ್ರಾರ್ಥಿಸುತ್ತೇನೆ.

ಇತ್ತೀಚಿಗೆ ರಾಷ್ಟ್ರೀಯ ಸಂಸ್ಥೆಯವರು, ರಾಷ್ಟ್ರಪತಿ ರೋವರ್ಸ್-ರೇಂಜರ್ಸ್, ಸ್ಕೌಟ್ಸ್-ಗೈಡ್ಸ್‌ಗಳ ಅರ್ಜಿಗಳಲ್ಲಿ ಹಲವು ಬದಲಾವಣೆ ಮಾಡಿ ಮಾರ್ಗಸೂಚಿ ನೀಡಿದ್ದು, ರಾಜ್ಯ ಸಂಸ್ಥೆ, ಜಿಲ್ಲಾ ಸಂಸ್ಥೆಗಳು, ವಿವಿಧ ನಾಯಕರುಗಳಿಗೆ ಹಾಗೂ ಜಿಲ್ಲಾ ಸಂಘಟನೆಗೆ ಸಂಬಂಧಪಟ್ಟವರಿಗೆ ಈಗಾಗಲೇ ಕಳುಹಿಸಲಾಗಿದೆ. ಸ್ಕೌಟರ್ಸ್-ಗೈಡರ್ಸ್‌ಗಳಲ್ಲಿ ನನ್ನ ಮನವಿ-ಚಳವಳಿ ಬೆಳವಣಿಗೆಗೆ ನಿಮ್ಮಗಳ ಸಹಾಯ-ಸಹಕಾರ ಹಾಗೂ ಹೆಚ್ಚಿನ ತ್ಯಾಗ ಅವಶ್ಯವಾಗಿ ಬೇಕಾಗಿದ್ದು, ತಾವು ಇದಕ್ಕೆ ಸದಾ ತಯಾರಾಗಿದ್ದೀರೆಂದು ನಂಬಿದ್ದೇನೆ. ರಾಷ್ಟ್ರ ಸಂಸ್ಥೆಯವರ ಮಾರ್ಗ ಸೂಚಿಯನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.

ರಾಜ್ಯ ಪುರಸ್ಕಾರ ತರಬೇತಿ ಶಿಬಿರಗಳಲ್ಲಿ ಜಿಲ್ಲಾ ಸಂಸ್ಥೆಗಳು ರಾಜ್ಯ ಸಂಸ್ಥೆಯೊಂದಿಗೆ ಚರ್ಚಿಸಿ ಆಯೋಜಿಸುತ್ತಿದ್ದು, ನಾನು ರಾಜ್ಯ ಸಂಘಟನಾ ಹಾಗೂ ತರಬೇತಿ ಆಯುಕ್ತರುಗಳಿಗೆ ಹಾಗೂ ಹಿರಿಯ-ಕಿರಿಯ ತರಬೇತುದಾರರುಗಳಿಗೆ ಕೆಳಕಂಡಂತೆ ಸೂಚಿಸಿದ್ದೇನೆ. ಯಾವ ಜಿಲ್ಲೆಗಳಲ್ಲಿ ರಾಜ್ಯಪುರಸ್ಕಾರಕ್ಕೆ ಅರ್ಹತೆಉಳ್ಳ ಅಭ್ಯರ್ಥಿಗಳಿಗೆ, ಟೆಸ್ಟಿಂಗ್ ಕ್ಯಾಂಪ್ ಏರ್ಪಡಿಸಲಾಗುವುದೋ, ಆ ಜಿಲ್ಲೆಗಳಿಗೆ ರಾಜ್ಯ ಸಂಘಟನಾ ಹಾಗೂ ತರಬೇತಿ ಆಯುಕ್ತರು ಹೋಗಬೇಕೆಂತಲೂ ಹಾಗೂ ಜಿಲ್ಲೆಗಳಿಗೆ ರಾಜ್ಯ ಸಂಸ್ಥೆ ಈಗಾಗಲೇ ನೇಮಿಸಿರುವ ಜಿಲ್ಲಾ ಮೇಲ್ವಿಚಾರಕರುಗಳು ಕಡ್ಡಾಯವಾಗಿ ಶಿಬಿರಗಳಲ್ಲಿ ಹಾಜರಿದ್ದು ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಲ್ಲಿ ಸಹಾಯ-ನೆರವು-ಮಾರ್ಗದರ್ಶನ ಮಾಡಲು ಸೂಚಿಸಿರುತ್ತೇನೆ. ಈ ಬದಲಾವಣೆ ಸೂಕ್ತ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಲ್ಲಿ ಹೆಚ್ಚು ಪರಿಣಾಮಕಾರಿಯಾಗುವುದೆಂದು ಚಿಂತಿಸಲಾಗಿದೆ.

ಸ್ಕೌಟ್ ಶತಮಾನೋತ್ಸವದ ಸವಿನೆನಪಿಗಾಗಿ ರಾಜ್ಯದ ಸ್ಕೌಟ್-ಗೈಡ್ ಕೇಂದ್ರ ಕಾರ್ಯಾಲಯದಲ್ಲಿ ಹಾಗೂ ಮೂರು ರಾಜ್ಯ ತರಬೇತಿ ಕೇಂದ್ರಗಳಲ್ಲಿ ಲಾರ್ಡ್ ಬೇಡನ್ ಪೊವೆಲ್ ಅವರ ಬಸ್ಟ್ ಹಾಗೂ ಸೂಕ್ತ ಸ್ಮಾರಕವನ್ನು ಸ್ಥಾಪಿಸಲು ಕಾರ್ಯಯೋಜನೆ ಸಿದ್ಧಪಡಿಸಲಾಗುತ್ತಿದೆ. ಇದೇ ರೀತಿ ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳಲ್ಲೂ ಸೂಕ್ತ ಸ್ಮಾರಕಗಳನ್ನು ಹಾಗೂ ವಿವಿಧ ಬಗೆಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಬಗ್ಗೆ ರಾಜ್ಯ ಸಂಸ್ಥೆ ಹಂತದಲ್ಲಿ ಟಾಸ್ಕ್‌ಫೋರ್ಸ್ ಸಮಿತಿ ರಚಿಸಿದ್ದು ಸದ್ಯದಲ್ಲಿಯೇ ವಿವರಗಳನ್ನು ಸಂಸ್ಥೆಯ ಎಲ್ಲಾ ಹಂತದ ಕಾರ್ಯಕರ್ತರುಗಳಿಗೆ ತಲುಪಿಸುವ ಪ್ರಯತ್ನ ನಡೆದಿದೆ. ನೀವುಗಳು ಸ್ಕೌಟ್ ಶತಮಾನೋತ್ಸವ ಕಾರ್ಯಕ್ರಮವನ್ನು ನಿಮ್ಮ ಹಂತಗಳಲ್ಲಿ ಯಶಸ್ವಿಗೊಳಿಸುವಲ್ಲಿ ಸಹಕರಿಸಬೇಕೆಂದು ತಮ್ಮಲ್ಲಿ ಕೋರುತ್ತೇನೆ.

ಈ ವರ್ಷದಲ್ಲಿ ರಾಜ್ಯ ಸಂಸ್ಥೆ ಆಯೋಜಿಸಿರುವ ಎಲ್ಲ ತರಬೇತಿ ಶಿಬಿರಗಳೂ ಒಂದಲ್ಲ ಒಂದು ರೀತಿಯಲ್ಲಿ ಸ್ಕೌಟ್ ಶತಮಾನೋತ್ಸವ ಆಚರಿಸುವತ್ತ ತನ್ನ ಸಂಪೂರ್ಣ ಚಿಂತನೆ ಹೊಂದಿದ್ದು, ತಾವುಗಳೂ ಕೂಡ ತಮ್ಮ ಹಂತಗಳಲ್ಲಿ ಜರುಗಲಿರುವ ಎಲ್ಲಾ ಕಾರ್ಯಕ್ರಮಗಳನ್ನು ಈ ಸದಾಶಯದತ್ತ ಕೇಂದ್ರೀಕರಿಸಬೇಕೆಂದು ಸೂಚಿಸಬಯಸುತ್ತೇನೆ. **ಮತ್ತೊಂದು ಮಾತು** - ಚಳವಳಿಯಲ್ಲಿ ದಶಕಗಳ ಕಾಲ ಸೇವೆ ಸಲ್ಲಿಸಿ ನಿವೃತ್ತರಾದ ವಿವಿಧ ಹಂತದ ತರಬೇತಿ ಪಡೆದ ಶಿಕ್ಷಕ / ಶಿಕ್ಷಕಿಯರು ನಿಮ್ಮ ಬಡಾವಣೆಗಳಲ್ಲಿ, ಊರಿನಲ್ಲಿ ಹಾಗೂ ತಾಲ್ಲೂಕಿನಲ್ಲಿ ಇರುವುದು ಎಲ್ಲರಿಗೂ ಗೊತ್ತಿರುವ ವಿಷಯ. ಅವರುಗಳಲ್ಲಿ ನನ್ನ ಮನವಿ-ದಯಮಾಡಿ ತಾವು, ನೀವು ವಾಸಿಸುವ ಸ್ಥಳಗಳಲ್ಲಿನ ಸ್ಥಳೀಯ ಸಂಸ್ಥೆಗಳು, ಮುಕ್ತ ದಳಗಳು ಅಥವಾ ಜಿಲ್ಲಾ ಸಂಸ್ಥೆಗಳನ್ನು ಸಂಪರ್ಕಿಸಿ ನಿಮ್ಮ ಅಮೂಲ್ಯ ಅನುಭವ ಹಾಗೂ ಸೇವೆಯನ್ನು ಸಂಬಂಧಪಟ್ಟ ಸಂಸ್ಥೆಗಳೊಂದಿಗೆ ಹಂಚಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ. **ಇಷ್ಟು ಮಾತ್ರ ಸತ್ಯ** - ನೂರು ವರುಷದ ನಂತರವೂ ಚಳವಳಿಯ ಹೆಜ್ಜೆ ಗುರುತುಗಳನ್ನು ಉಳಿಸುವಲ್ಲಿ ಸ್ಕೌಟ್ ಮಾಸ್ಟರ್ಸ್-ಗೈಡ್ ಕ್ಯಾಪ್ಟನ್ಸ್, ಫ್ಲಾಕ್ ಲೀಡರ್ಸ್-ಕಬ್ ಮಾಸ್ಟರ್ಸ್, ರೋವರ್-ರೇಂಜರ್

ಲೀಡರ್ಸ್‌ಗಳ ಪಾತ್ರ ಅತ್ಯಂತ ಮಹತ್ವದ್ದು ಎಂದು ಸಂಸ್ಥೆಯ ಮುಖ್ಯ ಕಾರ್ಯಕರ್ತನಾಗಿ ನಿಮ್ಮೆಲ್ಲರೊಂದಿಗೆ ಹಂಚಿಕೊಳ್ಳ ಬಯಸುತ್ತೇನೆ. ಇದು ನನ್ನ ಸ್ವಂತ ಅನುಭವ ಕೂಡ.

**ಇನ್ನೊಂದು ವಿಚಾರ** - ನಿಮ್ಮ ಹಂತಗಳಲ್ಲಿ ಶಾಲಾದಳ-ಮುಕ್ತದಳ-ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳಲ್ಲಿ ಕಳೆದ 9 ದಶಕಗಳಿಂದ ನಿಸ್ವಾರ್ಥ ಸೇವೆ ಸಲ್ಲಿಸಿದ, ನಿಮ್ಮೊಡನಿರುವ ಹಾಗೂ ಈಗ ಇಲ್ಲದಿರುವ, ಚಳವಳಿಗೆ ತ್ಯಾಗಮಾಡಿದ ಹಿರಿಯರು-ಗುರುಗಳ ಬಗ್ಗೆ ವಿಶೇಷ ಸಚಿತ್ರ ಸಹಿತ ಲೇಖನ ಕಳುಹಿಸಲು ಕೋರುತ್ತೇನೆ. ಇದನ್ನು ಸಂಪಾದಕ ಮಂಡಳಿ ಪರಿಷ್ಕರಿಸಿದಂತೆ **ಕರ್ನಾಟಕ ಸ್ಕೌಟಿಂಗ್ ಇತಿಹಾಸದ ಪುಟಗಳು** ಎಂದು ರಾಜ್ಯ ಸಂಸ್ಥೆಯಮುಖೇನ ಪ್ರಕಟಿಸಲಿದ್ದೇವೆ. ಈ ಬಗ್ಗೆ ನಿಮ್ಮ ಚಿಕ್ಕ ಹಾಗೂ ಚೊಕ್ಕ ಬರಹ ಹಾಗೂ ಅವಶ್ಯವಾದ ಚಿತ್ರಗಳನ್ನು ರಾಜ್ಯ ಕಾರ್ಯದರ್ಶಿ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕೋಟೆ, ಬೆಂಗಳೂರು-560 002. ಇಲ್ಲಿಗೆ ಡಿಸೆಂಬರ್ 31, 2006ರ ಒಳಗೆ ಕಳುಹಿಸಲು ಸೂಚಿಸುತ್ತೇನೆ. ಈ ಬಗ್ಗೆ ಪತ್ರಿಕೆಯ ಓದುಗರಿಂದ, ಚಳವಳಿಯ ಎಲ್ಲ ಹಂತದ ಕಾರ್ಯಕರ್ತರಿಂದ ಉತ್ತಮ ಪ್ರತಿಕ್ರಿಯೆಯ ನಿರೀಕ್ಷೆಯಲ್ಲಿದ್ದೇನೆ.

**ಮತ್ತೊಂದು ಹೆಮ್ಮೆಯ ಸಂಗತಿ :** 22ನೇ ಸೆಪ್ಟೆಂಬರ್ 2006 ರಂದು ಬೆಂಗಳೂರು ಮಲ್ಲೇಶ್ವರದ ಕ್ಲೂನಿ ಕಾನ್ವೆಂಟ್‌ಗೈಡ್ ದಳದ ಸುವರ್ಣ ಮಹೊತ್ಸವ ಸಮಾರಂಭ - ಶಾಲೆಯ ಸಭಾಂಗಣದಲ್ಲಿ ಅತ್ಯಂತ ಸಂಭ್ರಮ, ಸಡಗರ ವಿಜೃಂಭಣೆಯೊಂದಿಗೆ ನೆರವೇರಿತು. ಕ್ಲೂನಿ ಕಾನ್ವೆಂಟಿನ ಗೈಡ್ ದಳಗಳಿರುವ ಪಶ್ಚಿಮ ಬಂಗಾಳ, ಕೇರಳ, ಚೆನ್ನೈಗಳಿಂದಲೂ ಒಂದೊಂದು ಗೈಡ್ ದಳಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದು, ಸುವರ್ಣ ಮಹೋತ್ಸವ ಸಮಾರಂಭ ಅತ್ಯಂತ ವರ್ಣರಂಜಿತವಾಗಿ ನೆರವೇರಿತು. ನಾನು ಈ ಸುಂದರ ಸಮಾರಂಭದಲ್ಲಿ ಅಭಿಮಾನದಿಂದ ಭಾಗವಹಿಸಿ ಶಾಲೆಯ ಮೊದಲ ಗೈಡ್ ಕ್ಯಾಪ್ಟನ್ ಮಿಸ್. ಪದ್ಮನಾಯರ್ ಅವರನ್ನು ಗೌರವಿಸಿದ್ದೇನೆ ಹಾಗೂ ಸಂಸ್ಥೆಯ ಆಡಳಿತ ವರ್ಗ ಹಾಗೂ ಗೈಡ್ ಕ್ಯಾಪ್ಟನ್‌ಗಳನ್ನು ಹಾಗೂ ಪೋಷಕರುಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಧನ್ಯವಾದ ಅರ್ಪಿಸಿದ್ದೇನೆ. ಚಳವಳಿಯ ಶತಮಾನೋತ್ಸವದ ಶುಭ ಸಂದರ್ಭದಲ್ಲಿ ಕ್ಲೂನಿ ಕಾನ್ವೆಂಟಿನ ಗೈಡ್ ದಳದ ಸುವರ್ಣ ಮಹೋತ್ಸವದ ಆಚರಣೆಯಲ್ಲಿ ಭಾಗವಹಿಸಿದ ಎಲ್ಲರಲ್ಲೂ ಸಂತೋಷ ತೃಪ್ತಿ ಉಂಟು ಮಾಡಿತ್ತು. ರಾಜ್ಯದ ಬೇರೆ ಬೇರೆ ಶಾಲೆಗಳೂ ಕೂಡ ತಮ್ಮ ದಳಗಳ ರಜತೋತ್ಸವ, ಸುವರ್ಣ ಮಹೋತ್ಸವ ಆಚರಿಸುವ ಮೂಲಕ ಚಳವಳಿಯ ಬೆಳವಣಿಗೆ ನಾಂದಿ ಹಾಡಲಿ ಎಂದು ಆಶಿಸುತ್ತೇನೆ.

ದಿನಾಂಕ 23 ಸೆಪ್ಟೆಂಬರ್‌ನಂದು ಗದಗಿನಲ್ಲಿ ಜರುಗಿದ, 24 ಸೆಪ್ಟೆಂಬರ್‌ನಂದು ಬಳ್ಳಾರಿಯಲ್ಲಿ ಜರುಗಿದ ವಿಭಾಗ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರುಗಳ, ಕಾರ್ಯದರ್ಶಿಗಳ ಕೋಶಾಧಿಕಾರಿಗಳ, ಸಮಾವೇಶದಲ್ಲಿ ಭಾಗವಹಿಸಿದ್ದೆ. ಚಳವಳಿಯ ಬೆಳವಣಿಗೆ ಬಗ್ಗೆ ಹಾಗೂ ತಮ್ಮಗಳ ಹಂತದಲ್ಲಿ ನಿರ್ವಹಿಸಬೇಕಾದ ಜವಾಬ್ದಾರಿ ಕರ್ತವ್ಯಗಳ ಬಗ್ಗೆ ವಿಚಾರ ವಿನಿಮಯ ನಡೆಯಿತು. ಸೆಪ್ಟೆಂಬರ್ 25 ರಂದು ಜರುಗಿದ ಕೊಂಡಜ್ಜಿ ಶಿಬಿರ ಅಭಿವೃದ್ಧಿ ಸಭೆ ಹಾಗೂ ಕಬ್ ಹಾಗೂ ಸ್ಕೌಟ್ ವಿಭಾಗಗಳ ಮುಂದುವರೆದ ತರಬೇತಿ, ಸ್ಕೌಟ್ ವೃಕ್ಷಮಣಿ ದಾರಕರ ತರಬೇತಿಗೆ ಬಂದಿದ್ದ 65 ಅಭ್ಯರ್ಥಿಗಳೊಂದಿಗೆ ನಾಯಕರುಗಳೊಂದಿಗೆ ಚಳವಳಿಯ ಚಿಂತನೆಗಳನ್ನು ಹಂಚಿಕೊಂಡಿದ್ದೇನೆ. ಸಮಾವೇಶದ ವಿವರಗಳನ್ನು ಮುಂದಿನ ಸಂಚಿಕೆಯಲ್ಲಿ ಪ್ರಕಟಿಸಲಾಗುವುದು.

ಸ್ಕೌಟ್ ಶತಮಾನೋತ್ಸವದ ಹಾರ್ದಿಕ ಶುಭಾಷಯಗಳು ಹಾಗೂ ಅಭಿನಂದನೆಗಳೊಡನೆ.

ತಮ್ಮ ವಿಶ್ವಾಸಿ

**ಕೊಂಡಜ್ಜಿ ಬ. ಷಣ್ಮುಖಪ್ಪ**

# 88ನೇ ರಾಜ್ಯ ಪರಿಷತ್ ಸಭೆ

ದಿನಾಂಕ 31.08.2006 ರಂದು ರಾಜ್ಯ ತರಬೇತಿ ಕೇಂದ್ರ, ಬೆಸೆಂಟ್ ಪಾರ್ಕ್‌ನಲ್ಲಿ 88ನೇ ರಾಜ್ಯ ಪರಿಷತ್ ಸಾಮಾನ್ಯ ಸಭೆ ಜರುಗಿತು. ಮಾನ್ಯಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಜಿಲ್ಲಾ ಮುಖ್ಯ ಆಯುಕ್ತರು, ಶಿವಮೊಗ್ಗ ಇವರು ಅಧ್ಯಕ್ಷತೆ ವಹಿಸಿ ಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಟ್ಟರು. ಸಂಸ್ಥೆಯ ಬೆಳವಣಿಗೆಗಾಗಿ ಅನೇಕ ಉಪಯುಕ್ತ ವಿಷಯಗಳ ಬಗ್ಗೆ ಚರ್ಚಿಸಿಲಾಯಿತು.

## ಉತ್ತಮ ಕಾರ್ಯ ಹಾಗೂ ಸಂಘಟನೆಗಾಗಿ ರಾಜ್ಯ ಮಟ್ಟದ ಮತ್ತು ವಿಭಾಗ ಮಟ್ಟದ ಪ್ರಶಸ್ತಿಗಳು

ಉತ್ತಮ ಕಾರ್ಯ ಹಾಗೂ ಸಂಘಟನೆಗಾಗಿ ರಾಜ್ಯ ಮಟ್ಟದ ಮತ್ತು ವಿಭಾಗ ಮಟ್ಟದ ಪರ್ಯಾಯ ಫಲಕ ಹಾಗೂ ಪಾರಿತೋಷಕಗಳನ್ನು ವಿವಿಧ ಜಿಲ್ಲೆಗಳಿಗೆ ಪ್ರಧಾನ ಮಾಡಲಾಯಿತು. ಪರಿಷತ್ ಅಧ್ಯಕ್ಷ ಶ್ರೀ ಟಿ.ವಿ. ನಾರಾಯಣಶಾಸ್ತ್ರಿ, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಹಾಗು ರಾಜ್ಯ ಆಯುಕ್ತರುಗಳು ಹಾಗೂ ಪದಾಧಿಕಾರಿಗಳು, ಪ್ರಶಸ್ತಿಗಳನ್ನು ಸಂಬಂಧಪಟ್ಟ ಜಿಲ್ಲೆಗಳಿಗೆ ಪ್ರದಾನ ಮಾಡಿದರು. ವಿವರಗಳು ಕೆಳಕಂಡಂತಿವೆ.

## ರಾಜ್ಯ ಮಟ್ಟದ ಪರ್ಯಾಯ ಫಲಕಗಳು

| ಪ್ರಶಸ್ತಿ ವಿವರಗಳು | ಜಿಲ್ಲೆಗಳ ಹೆಸರು |
|---|---|
| ಅಬ್ದುಲ್ ಗಫಾರ್ ಪರ್ಯಾಯ ಫಲಕ (ರಾಜ್ಯದ 1ನೇ ಅತ್ಯುತ್ತಮ ಜಿಲ್ಲೆ) | ದಕ್ಷಿಣ ಕನ್ನಡ |
| ಜಸ್ಟೀಸ್ ಕೆ. ಶಂಕರನಾರಾಯಣರಾವ್ ಪರ್ಯಾಯ ಫಲಕ (ರಾಜ್ಯದ 2ನೇ ಅತ್ಯುತ್ತಮ ಜಿಲ್ಲೆ) | ಬೆಳಗಾಂ |
| ಮೇಜರ್ ವೈ.ವಿ.ಕೆ. ಮೂರ್ತಿ ಪರ್ಯಾಯ ಫಲಕ (ರಾಜ್ಯದ 3ನೇ ಅತ್ಯುತ್ತಮ ಜಿಲ್ಲೆ) | ದಾವಣಗೆರೆ |

## ವಿಭಾಗದ ಮಟ್ಟದ ಪ್ರಶಸ್ತಿಗಳು

| ಪ್ರಶಸ್ತಿ ವಿವರಗಳು | ಜಿಲ್ಲೆಗಳ ಹೆಸರು |
|---|---|
| **ಬೆಂಗಳೂರು ವಿಭಾಗ** | |
| ವಿ.ಪಿ. ದೀನದಯಾಳು ನಾಯ್ಡು ಪರ್ಯಾಯ ಫಲಕ ಪ್ರಥಮ ಸ್ಥಾನ | ಚಿತ್ರದುರ್ಗ |

| | |
|---|---|
| ದ್ವಿತೀಯ ಸ್ಥಾನ | **ತುಮಕೂರು** |
| ತೃತೀಯ ಸ್ಥಾನ | **ಬೆಂಗಳೂರು ಉತ್ತರ** |

## ಮೈಸೂರು ವಿಭಾಗ

**ಜೆ.ಬಿ. ಮಲ್ಲಾರಾಧ್ಯ ಪರ್ಯಾಯ ಫಲಕ**

| | |
|---|---|
| ಪ್ರಥಮ ಸ್ಥಾನ | **ಉಡುಪಿ** |
| ದ್ವಿತೀಯ ಸ್ಥಾನ | **ಕೊಡಗು** |
| ತೃತೀಯ ಸ್ಥಾನ | **ಮೈಸೂರು ನಗರ** |

## ಬೆಳಗಾಂ ವಿಭಾಗ

**ಕೊಂಡಜ್ಜಿ ಬಸಪ್ಪ ಪರ್ಯಾಯ ಫಲಕ**

| | |
|---|---|
| ಪ್ರಥಮ ಸ್ಥಾನ | **ಧಾರವಾಡ** |
| ದ್ವಿತೀಯ ಸ್ಥಾನ | **ಬಿಜಾಪುರ** |
| ತೃತೀಯ ಸ್ಥಾನ | **ಗದಗ** |

## ಗುಲ್ಬರ್ಗಾ ವಿಭಾಗ

**ಪ್ರೊ. ಪಿ. ಶಿವಶಂಕರ್ ಪರ್ಯಾಯ ಫಲಕ**

| | |
|---|---|
| ಪ್ರಥಮ ಸ್ಥಾನ | **ಬಳ್ಳಾರಿ** |
| ದ್ವಿತೀಯ ಸ್ಥಾನ | **ರಾಯಚೂರು** |
| ತೃತೀಯ ಸ್ಥಾನ | **ಬೀದರ್** |

**ಶ್ರೀಮತಿ ಗೀತಾ ನಟರಾಜ್**
ರಾಜ್ಯ ಜಂಟಿ ಕಾರ್ಯದರ್ಶಿ (ಗೈಡ್ಸ್)

**ಶ್ರೀ ಸುರೇಶ್ ಹೆಬ್ಳೀಕರ್**
ರಾಜ್ಯ ಕಾರ್ಯದರ್ಶಿ

*Teachers are the Nation Builders, Teachers shape the mind of the Children who are the future of the Nation. They import a Value System, Groom Personality of Children.*

*- Dr. Manmohan Singh*
*Hon'ble Prime Minister of India*

# RECOGNITION OF LADY BADEN POWELL LIFE AND HER FAMILY - MONUMENTS AND SCOUT / GUIDE LAND MARKS

*"To commemorate the 50 years of Scouting / Guiding in the Asia Pacific Region and the 100 years of World Scouting is to document various ways of recognising the founder and his family. The purpose is to give tribute to the Lady Baden Powell and her family. To recognise them in many forms like Structures, Halls, Footprints, Literature, Photographs, Commemorative Coins or Stamps, Letters from Lady BP & BP etc. Please provide Photos and Matters together and enable us to send to the National Headquarters on or before 5th October, 2006. All the Matter & Photos will be finalised by the National Headquarters Panel members and a book will be printed and the book will be released at the time of Asia Pacific Committee (Members) Meeting Scheduled in January 2007 at National Headquarters, New Delhi"*

*Notel :- Please send the above Document (if you have any) to the State Secretary / Joint State Secretary (Guides), The Bharat Scouts and Guides Karnataka, Prof. P. Sivashankar Circle, Kondajji Basappa Road, Fort, Bangalore-560 002. immediately to enable us to forward the Photos / Material / Document to NHQ, New Delhi*

***"We Want that Education by which Character is Formed, Strength of Mind is Increased, the Intellect is Expanded, and by which one can stand on one's own Feet"***

***- Swami Vivekananda***

THE BHARAT SCOUTS & GUIDES, NATIONAL HEADQUARTERS, NEW DELHI

# REVISED PROPOSED GUIDELINES FOR RASHTRAPATI AWARD TESTING CAMP

**(NHQ Circular dated 19.05.2006)**

## PREAMBLE :

*The President of the Indian Union has been graciously pleased to authorize the issue of a special certificate to a Scout / Guide / Rover / Ranger who earns the Rashtrapati badge.*

*The President of India on the advice of the National Commissioner presents the Rashtrapati Award Certificates at a formal ceremony.*

## METHODOLOGY :

*The States have been given the privilege and responsibility in the advancement of Scouts and Guides up to Rajya Puraskar level and up to Nipun Level for Rovers and Rangers. Beyond the stage as per unanimous recommendation of the Sandhan and the decision of the National Executive Committee, the National Headquarters should arrange for testing camps of prospective Rashtrapati Scout / Guide / Rover / Ranger.*

*The Testing Camps will be held separately for Scout / Guide wings of the Movement.*

*The National Commissioner who is the final authority to grant Rashtrapati Award shall issue from time to time suitable directives in respect of badges, tests, etc, and ensure the standard.*

*National Headquarters conducts the tests of Rashtrapati Award at Regional level through Regional Headquarters on behalf of National Commissioner as an ongoing process. All Testing Camps will be at Regional level only.*

*The Dy. Director (Boy / Girl Programme) are responsible for their respective wing. Testing camps to be conducted by the Regional Organizing Commissioners with the help of a panel of Examiners under the guidance of the Jt. Directors of the respective wing.*

## ELIGIBILITY:

*A Rajya Puraskar Scout / Guide is*

*eligible for Testing Camp on completion of 13 years and 9 months of age but eligible to receive Rashtrapati Award only after completion of 14 years of age.*

*A Rajya Puraskar Scout / Guide is eligible to become a Rashtrapati Scout / Guide up to the age of 17 years provided he / she subscribes to the Scout / Guide promise and Law and becomes a member of a Scout Troop / Guide Company. If a Scout / Guide continues to be in the school, he / she will be allowed to appear in the Rashtrapati Award Testing Camp until he / she is 18 years of age up to the date of Testing Camp. Age will be counted on the date of receipt of application at NHQ.*

*A Nipun Rover / Ranger is eligible to qualify for the Rashtrapati Award on completion of 19 years of age and after serving atleast one year as Nipun Rover/ Ranger, Nipun Testing Camp will be conducted by the State Headquarters of the respective states.*

*A Rover / Ranger who has completed 25 years of age will not be eligible for Rashtrapati Rover / Ranger Award.*

*The State Chief Commissioner can extend the age limit for 3 years provided, special permission is allowed in time (before completion of 25 years of age-ref-APRO Part-II Chapter (III) Rule l-(b).*

## REGISTRATION :

*As soon as a Scout / Guide is qualified for Rajya Puraskar and a Rover / Ranger is qualified for Nipun Badge irrespective of being presented the certificate or not and completed the requirements of Rashtrapati Award, the names should be registered with the National Headquarters, by duly submitting the information sheets.*

*The Scout Master / Guide Captain / Rover Scout Leader / Ranger Leader as the case may be, shall inform the National Headquarters through proper channel on a prescribed registration form available from the State Headquarters that the Rajya Puraskar Scout / Guide or Nipun Rover / Ranger, as the case may be, has completed the requirement of Rashtrapati Award. The Scout / Guide / Rover / Ranger, shall record his / her attainments for Rashtrapati Award on the said form and alongwith information sheet and submit the same to the National Headquarters through proper channel. This may be prepared in quadruplicate and the first two copies be sent to the Director retaining the 3rd copy at the State*

*Headquarters. This should be an ongoing practice for all Scout / Guide / Rover / Ranger. Last date for receiving the application for National Headquarters for Rashtrapati Award will be 30th June for that year.*

*The Dy. Director concerned will register the name, forward the second copy to the concerned Assistant Director along with list of the participants who are not eligible for his / her record and follow up. Only eligible candidates will be invited for the Testing Camp organized by the concerned Assistant Director.*

## RASHTRAPATI TESTING CAMP

*The choice of dates and Venue are left to the Regional Headquarters in consultation with the respective host States provided the training centre where testing is to be conducted falls in the list of centers approved by the National Headquarters. In no case the number of participant examinees shall exceed 200. The ideal size for testing camp would be 150. States should confirm their participation 15 days prior to the start of the testing camp to the Regional Headquarters and National Headquarters.*

*Judging at Regional Level :- A panel of examiners will be formed by National Headquarters in consultation with the Regional Headquarters, comprising Leader Trainers, Asst. Leader Trainers, Senior HWB Holders of the concerned section only. State Org. Commissioners of the states may be deputed for various testing camps. The Regional Org. Commissioner / Asst. Director will be Leader and accountable for conducting, organizing and finalizing the result of the Testing Camp.*

## DUTIES OF THE LEADER

1. *To invite Staff sufficient in no. as per expected no. of participants.*
2. *Organise the testing Camp smoothly.*
3. *Arranging all the material needed with the help of Host State.*
4. *Ensuring registration of candidates.*
5. *To ensure testing as per base system, Guidelines and questionnaire must be followed as a model. If the Leader thinks necessary other questions may be added.*
6. *To ensure standard and impartiality in the Testing.*
7. *To arrange effective and standardize Workshop to help the candidates to reappear in the base only for skill subjects.*
8. *To ensure that the candidates have brought :-*

a) *Proficiency Badge certificates from authorized Examiners.*
b) *Age proof.*
c) *Individual logbook indicating progress in badges and other subjects.*
d) *Material related to the proficiency Badges / Skills in which testing will be done at the Testing Camp.*
e) *One Passport Size Photo in Uniform.*

9. *The leader should ensure that he works as examiner in atleast one base.*
10. *To ensure that the score sheet and result sheet are prepared as per the guidelines.*
11. *He / She will be fully responsible for organizing, conducting and submitting result to the NHQ.*

## Chief Examiner :

*There will be a Chief Examiner among the senior and experienced examiners. Chief Examiner will assist the leader by conducting impartial testing as per Guideline and Questionnaire.*

## Workshop :

*A workshop will be organized with the help of staff / unit leaders by making them perfect in all respect to help the candidates to reappear in the base. Before sending the candidates to workshop, examiner will put signature in the workshop column in the Test Card and Workshop Incharge will also countersign in the same column after the candidates attend the workshop. Every candidate is eligible to attend workshop in maximum any three subjects only.*

## Result :

- *The Regional Headquarters will announce the result after getting the approval of National Headquarters.*
- *The minimum-qualifying standard for recommendation of Rashtrapati Award in Testing will be 80% in each subject in Pravesh and 60% in each subject other than Pravesh for Scout and Guide Section, but 60% in each subject for Rover & Ranger Section.*
- *Each subject is given marks out of 1 0 only.*

## General Instructions :

- *All the candidates are expected to be in correct and complete uniform as per APRO part- 11/111 at the time of registration.*
- *It is obligatory for all registered candidates to bring with them log*

*Book, Certificates, Reports, Material related to testing of Proficiency Badges / Skills while coming to Testing Camp.*

- *Testing Camp will be for 5 days and residential in nature. Candidates will not be allowed to leave during the camp.*
- *For the purpose of Testing, generally, the base method will be followed The Chief Examiner will depute examiners in consultation with the leader.*
- *The leader of the camp will announce the Daily Routine.*
- *The base score sheet shall be signed by the Examiners and countersigned by the leader and the decision of the examiners will be final.*
- *The final score sheet will be prepared by the leader with the signature of all the examiners.*
- *Development fee @ Rs. 507 per head will be collected from Scouts / Guides / Rovers / Rangers and @ Rs. 100/- per head from adult leaders.*
- *Special Fee @ Rs. 30/- per head will be collected from Scouts / Guides / Rovers / Rangers and adult leaders.*
- *No T.E. will be paid to participants. N.H.Q. will provide free hospitality during the camp.*
- *The Host State should ensure all the physical arrangements such as Testing Equipments, place for various test bases, proper seating arrangements, sanitation, electricity and water facility. They should also provide proper kitchen with all necessary equipments.*
- *Now the Host states will be paid Rs 5/- per head per day to meet the expenses for physical facilities such as water, electricity, cooking utensils and sanitations etc. This arrangement replaces the payment of 50% of development fee to the states hitherto applicable.*
- *Escorts will be admitted in the Camp in the ratio 1:10 only.*
- *No Candidate will be allowed to attend the testing camp for second time in the same year without prior approval from National Headquarters.*
- *The medium of test will be in Hindi or English.*




# ಪರಸ್ಪರ ತಿಳಿವಳಿಕೆ

ಗೊ.ರು. ಚನ್ನಬಸಪ್ಪ

ನಮ್ಮಲ್ಲಿ 'ಲೋಕಾನುಭವ' ಎಂಬ ಮಾತೊಂದಿದೆ. ಇದು ನಮ್ಮ ಜೀವನದ ಅತ್ಯಂತ ಅಮೂಲ್ಯವಾದ ಸಂಪತ್ತು. ಅಕ್ಷರದ ಮೂಲಕ ಪಡೆದ ಶಿಕ್ಷಣಕ್ಕಿಂತ ಇದು ಮೌಲಿಕವಾದದ್ದು. ಅನುಭವದ ಮೂಲಕ ಪಡೆದ ಜ್ಞಾನ ಹೆಚ್ಚು ಪರಿಣಾಮಕಾರಿ; ಪ್ರಯೋಜನಕಾರಿ, ವಾಸ್ತವವಾಗಿ ನಾವು ಶಾಲಾ ಕಾಲೇಜುಗಳಲ್ಲಿ ಕಲಿಯುವುದಕ್ಕಿಂತ, ನಮ್ಮ ಸುತ್ತಣ ಬದುಕನ್ನು ನೋಡಿ ಅಥವ ಕೇಳಿ ಕಲಿಯುವುದೇ ಹೆಚ್ಚು.

ನಮ್ಮ ಲೌಕಿಕ ಜೀವನದಲ್ಲಿ ಒಬ್ಬರಿಂದ ಮತ್ತೊಬ್ಬರು ಕಲಿಯುವುದು ಅಥವಾ ಒಬ್ಬರು ಮತ್ತೊಬ್ಬರಿಗೆ ಕಲಿಸುವುದು ಆದಿಯಿಂದಲೂ ನಡೆದುಕೊಂಡು ಬಂದಿದೆ. ಈ ಪ್ರಕ್ರಿಯೆಯ ಫಲವೇ ಲೋಕಾನುಭವ. ಮಾನವ ಜೀವನದಲ್ಲಿ ಆಗುವ ಬದಲಾವಣೆಗೆ ಈ ಲೋಕಾನುಭವ ನೀಡುವ ಪ್ರೇರಣೆ ಅದ್ಭುತವಾದದ್ದು; ಅನನ್ಯವಾದದ್ದು. ಆದ್ದರಿಂದಲೇ 'ಲೋಕವೇ ಶಾಲೆ, ಅನುಭವವೇ ಗುರು' ಎಂಬ ಮಾತು ಬಂದಿರುವುದು.

ಮನುಷ್ಯರಲ್ಲಿ ಸಾಮಾನ್ಯವಾಗಿ ಕಂಡು ಬರುವ ಎರಡು ಸ್ವಭಾವಗಳಿವೆ. ಒಂದು ಕುತೂಹಲ; ಮತ್ತೊಂದು ಸಂಶಯ, ಒಂದು ರೀತಿಯಲ್ಲಿ ಕುತೂಹಲವು ಅನುಕೂಲಕ್ಕೆ ಕಾರಣವಾದರೆ, ಸಂಶಯ ಅನಾಹುತಕ್ಕೆ ಕಾರಣವಾಗುತ್ತದೆ. ಕುತೂಹಲದಿಂದ ಹೊಸ ಹೊಸ ವಿಷಯಗಳನ್ನು ತಿಳಿದುಕೊಂಡು ಆ ಮೂಲಕ ಅರಿವನ್ನು ಹೆಚ್ಚಿಸಿಕೊಳ್ಳುವುದು ಒಳ್ಳೆಯ ಲಕ್ಷಣ. ಆದರೆ ಅನೇಕ ವೇಳೆ ಹೊಸ ವಿಚಾರಗಳ ಬಗ್ಗೆ ಸಂಪ್ರದಾಯಸ್ಥ ಮನಸ್ಸು ಸಂಶಯವನ್ನು ತಾಳುತ್ತದೆ. ಸಂಶಯಗ್ರಸ್ಥ ಮನಸ್ಸು ಗೊಂದಲಕ್ಕೀಡಾಗುತ್ತದೆ; ಇಲ್ಲವೇ ಅಂತಹ ಹೊಸದನ್ನು ಪೂರ್ಣವಾಗಿ ನಿರಾಕರಿಸಿಲೆತ್ನಿಸುತ್ತದೆ. ಇಂತಹ ಸಂದರ್ಭಗಳಲ್ಲಿ ನಮ್ಮ ನೆರವಿಗೆ ಬರುವುದೆಂದರೆ ಲೋಕಾನುಭವ.

ನಾನು ಮೊದಲೇ ಹೇಳಿದಂತೆ ಲೋಕಾನುಭವ ಗ್ರಂಥಸ್ಥ ಪಾಠದಿಂದ ಬರುವಂತಹುದಲ್ಲ. ಅದು ಪರಿಸರದ ಪ್ರಭಾವದಿಂದ ಬರುತ್ತದೆ. ಅಂದರೆ ಒಬ್ಬರು ಮತ್ತೊಬ್ಬರು ಕಲಿಯುವ ಪಾರಸ್ಪರಿಕ ಸಂಬಂಧದಿಂದ ಬರುತ್ತದೆ.

ನಾವು ಜೀವನದಲ್ಲಿ ಕಲಿಯಬೇಕಾದದ್ದು ಬಹಳವಿದೆ. ಅಂತಹ ಕಲಿಕೆಯಲ್ಲಿ ವ್ಯಕ್ತಿ ಜೀವನಕ್ಕೆ ಸಂಬಂಧಪಟ್ಟ ವಿಷಯಗಳು ಕೆಲವಿದ್ದರೆ, ಕುಟುಂಬ, ಸಮಾಜ, ರಾಷ್ಟ್ರ ಮತ್ತು ವಿಶ್ವ ಜೀವನಕ್ಕೆ ಸಂಬಂಧಿಸಿದ ವಿಷಯಗಳು ಕೆಲವಿರುತ್ತವೆ. ನಮ್ಮ

ಕಲಿಕೆಯೂ ಅಷ್ಟೆ. ಹಲವಾರು ರೂಪದಲ್ಲಿರುತ್ತದೆ. ಕೆಲವನ್ನು ಕೇಳಿ ಕಲಿಯುವುದಿದ್ದರೆ, ಮತ್ತೆ ಕೆಲವನ್ನು ಅನುಭವದಿಂದ ಕಲಿಯಬೇಕಾಗುತ್ತದೆ. ಅನುಭವ ಇದ್ದವರಿಂದ ಕೇಳಿ ಕಲಿಯುವುದು ಅಥವಾ ಅನುಭವ ಇದ್ದವರು ಹೇಳಿ ಕಲಿಸುವುದು ಹೆಚ್ಚು ಪ್ರಭಾವಪೂರ್ಣ; ಹೆಚ್ಚು ಫಲದಾಯಕ.

ಇಂದಿನ ಜಾಗತಿಕ ಸಮಸ್ಯೆಯಾಗಿರುವ ಮಿತಿಮೀರಿದ ಜನಸಂಖ್ಯೆಗೆ ಸಂಬಂಧಿಸಿದಂತೆ ಈ ಕೇಳಿ-ನೋಡಿ ಕಲಿಯುವುದು ಮತ್ತು ಹೇಳಿ ಕಲಿಸುವುದು ಅತ್ಯಂತ ಅಗತ್ಯವೆಂದು ನಾನು ಭಾವಿಸಿದ್ದೇನೆ.

ನಮಗೆಲ್ಲ ತಿಳಿದಿರುವಂತೆ ಇಂದು ಇಡೀ ವಿಶ್ವಕ್ಕೆ ಒಂದು ಸವಾಲಾಗಿರುವ ಸಮಸ್ಯೆಯೆಂದರೆ ಮಿತಿಗೆಟ್ಟು ಮೀರುತ್ತಿರುವ ಜನಸಂಖ್ಯೆ. ವಾಸ್ತವವಾಗಿ ವಿಶ್ವ ವ್ಯವಹಾರಕ್ಕೆ ಒಂದು ಅಮೂಲ್ಯ ಸಂಪನ್ಮೂಲವಾಗಬೇಕಾಗಿದ್ದ ಜನಸಂಖ್ಯೆ ಒಂದು ಸಮಸ್ಯೆಯಾಗಿರುವುದು ನಿಜಕ್ಕೂ ವಿಪರ್ಯಾಸ. ನೈಸರ್ಗಿಕ ಸಂಪನ್ಮೂಲಗಳಿಗೂ, ಅದನ್ನು ಬಳಸಿಕೊಳ್ಳುವ ಜೀವಿಗಳ ಸಂಖ್ಯೆಗೂ ಇರಬೇಕಾದ ಸಮತೋಲನ ತಪ್ಪಿರುವುದೇ ಈ ಸಮಸ್ಯೆ ಉಂಟಾಗಲು ಕಾರಣ.

ತೀವ್ರಗತಿಯಲ್ಲಿ ಏರುತ್ತಿರುವ ಇಂದಿನ ಜನಸಂಖ್ಯೆ ನಿಸರ್ಗದ ಪರಿಸರವನ್ನಷ್ಟೇ ಅಲ್ಲ, ಮಾನವ ಜನಾಂಗದ ಮೌಲ್ಯವನ್ನೇ ಹಾಳು ಮಾಡಿದೆ. ಹಸಿರಿನ ಹರಿಕಾರ ಎಂದು ಹೆಸರಾಗಿರುವ ಸುಂದರಲಾಲ್ ಬಹುಗುಣ ಅವರ ಮಾತುಗಳಲ್ಲೇ ಹೇಳುವುದಾದರೆ, "ನಿಸರ್ಗ ತೊಟ್ಟಿಲಲ್ಲಿ ದೇವರು ಮಾನವನನ್ನು ಸೃಷ್ಟಿಸಿದ. ಆದರೆ, ಆ ಮಾನವ ತಾನಿದ್ದ ತೊಟ್ಟಿಲನ್ನೇ ಚಿಂದಿ ಚಿಂದಿ ಮಾಡಿದ. ಉಣಬಡಿಸ ಬಂದ ಪ್ರಕೃತಿ ಮಾತೆಯ ಶೀಲಭಂಗಮಾಡಿ, ರಾಡಿ ಮಾಲಿನ್ಯದ ರಕ್ಕಸನನ್ನು ಸೃಷ್ಟಿಸಿದ. ಇದುವರೆಗೆ ಆಹಾರ, ಬಟ್ಟೆ ಮತ್ತು ವಸತಿ - ಈ ಮೂರು ಮಾನವನ ಮೂಲಭೂತ ಅಗತ್ಯಗಳಾಗಿದ್ದವು. ಆದರೆ ಈಗ ಇವಕ್ಕೆಲ್ಲ ಮೂಲಧಾರವಾಗಿರುವ ನೀರು ಮತ್ತು ಗಾಳಿಗೇ ಅಭಾವವುಂಟಾಗಿದೆ". ಸ್ಫಟಿಕದ ಶಲಾಕೆಯಂತೆ ಸ್ಫುಟವಾಗಿರುವ ಈ ಮಾತುಗಳನ್ನು ನಾವು ಗಂಭೀರವಾಗಿ ಚಿಂತಿಸಬೇಕಾಗಿದೆ.

ಮಾನವ ಸಂತಾನ ಈಗ ನೆಮ್ಮದಿ ತರುವ ಆಸ್ತಿಯಾಗಿಲ್ಲ. ವ್ಯಕ್ತಿ ತನ್ನ ಬದುಕಿನ ಕೊರತೆಯನ್ನು ತುಂಬಿಕೊಳ್ಳಲು ಏನೆಲ್ಲ ಅನೀತಿಯ ಮಾರ್ಗ ಹಿಡಿಯುತ್ತಿದ್ದಾನೆಂಬುದನ್ನು ನಾವು ನಿತ್ಯ ಕಾಣುತ್ತಿದ್ದೇವೆ. ಅವನಿಗೀಗ ತನ್ನ ಅಸ್ತಿತ್ವದ್ದೇ ಪ್ರಶ್ನೆ. ಹಾಗಾಗಿ ಕುಡಿತ, ಕಳ್ಳತನ, ಲಂಚ, ವಂಚನೆ ಇತ್ಯಾದಿ ಎಲ್ಲ ಅನಿಷ್ಟ-ಅವಲಕ್ಷಣಗಳಿಗೂ ಅವನು ಒಗ್ಗಿಕೊಂಡುಬಿಟ್ಟಿದ್ದಾನೆ. ವೈಯಕ್ತಿಕ ಅವಲಕ್ಷಣಗಳೆಲ್ಲ ಈಗ ಸಾಮೂಹಿಕಗೊಳ್ಳುತ್ತಿವೆ. ಇದಕ್ಕೆ ಕಾರಣ ಅಂಕೆಯಿಲ್ಲದೆ ಬೆಳೆಯುತ್ತಿರುವ ಜನಸಂಖ್ಯೆ. ಈ ಸಮಸ್ಯೆಯನ್ನು ಆದ್ಯತೆಯ ಆಧಾರದ ಮೇಲೆ ಯುದ್ಧಸಿದ್ಧತಾ ಭರದಲ್ಲಿ ಬಗೆಹರಿಸದಿದ್ದರೆ ಮಾನವನ ಜೀವನ ಊಹಿಸಲೂ ಸಾಧ್ಯವಾಗದಂತಹ ದುರಂತದ ದಳ್ಳುರಿಯಲ್ಲಿ ಬೆಂದು ಹೋಗುವಲ್ಲಿ ಸಂಶಯವಿಲ್ಲ ಎಂಬುದನ್ನು ಲೋಕಾನುಭವ ನಮಗೆ ತಿಳಿಸುತ್ತಿದೆ.

○

ಜಿಲ್ಲಾ ವಾರ್ತೆ

## ಬಿಜಾಪುರ ಜಿಲ್ಲೆ

ಮುದ್ದೇಬಿಹಾಳ ತಾಲೂಕಿನ ಇಂಗಳಗೇರಿ ಸರಕಾರಿ ಪ್ರೌಢ ಶಾಲೆಯಲ್ಲಿ ದಿನಾಂಕ 21.07.2006 ರಂದು ಸ್ಕೌಟ್ ವಿದ್ಯಾರ್ಥಿಗಳಿಗೆ ದೀಕ್ಷಾ ಸಮಾರಂಭ ನಡೆಯಿತು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎ.ಎಚ್. ಬಿರಾದಾರ, ಮುಖ್ಯೋಪಾಧ್ಯಾಯರು ವಹಿಸಿದ್ದರು. ಅತಿಥಿಗಳಾಗಿ ಶ್ರೀ ಎಚ್.ಪಿ. ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಆಗಮಿಸಿದ್ದರು. ಮಾನ್ಯ ಶ್ರೀ ಹೇಮರೆಡ್ಡಿ ಬ. ಮೇಟಿ, ಜಿಲ್ಲಾ ಪಂಚಾಯತ್ ಸದಸ್ಯರು, ಶ್ರೀಮತಿ ಶ್ರೀದೇವಿ ಸಿ. ಪಾಟೀಲ ತಾಲೂಕು ಪಂಚಾಯತ್ ಸದಸ್ಯರು ಅಲ್ಲದೆ ಎಸ್.ಡಿ.ಎಂ.ಸಿ. ಅಧ್ಯಕ್ಷರು, ಸದಸ್ಯರು, ಗ್ರಾಮ ಪಂಚಾಯಿತ್ ಸದಸ್ಯರು ಉಪಸ್ಥಿತರಿದ್ದರು.

ಶ್ರೀ ಬಿ.ಬಿ. ಸಜ್ಜನ, ಸ್ಕೌಟ್ ಮಾಸ್ಟರ್ ಇವರು ಸ್ಕೌಟ್ ಮಕ್ಕಳಿಗೆ ಪ್ರತಿಜ್ಞಾ ವಿಧಿ ಬೋಧಿಸಿ ದೀಕ್ಷಾ ಸಮಾರಂಭವನ್ನು ನಡೆಸಿದರು. ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಸಂಘಟನಾ ಆಯುಕ್ತರು, ಶ್ರೀ ಎ.ಕೆ. ಮುಲ್ಲಾ, ತಾಲ್ಲೂಕು ಸಂಸ್ಥೆ ಕಾರ್ಯದರ್ಶಿಗಳು, ಶ್ರೀ ಬೋಳಸೂರ ಸ್ಕೌಟ್ ಮಾಸ್ಟರ್ ಇವರ ಸಹಕಾರದಿಂದ ಸಮಾರಂಭವು ಬಹಳ ಅಚ್ಚುಕಟ್ಟಾಗಿ ನಡೆಯಿತು.

## ಉಡುಪಿ ಜಿಲ್ಲೆ

ದಿನಾಂಕ : 17-07-2006 ಪೂರ್ವಾಹ್ನ 10-00 ಗಂಟೆಗೆ ಕುಂದಾಪುರ ಸ್ಥಳೀಯ ಸ್ಕೌಟರ್ ಗೈಡರ್‌ಗಳ ಸಮಾವೇಶವು ಕಾರ್ಯಾಲಯದಲ್ಲಿ ನಡೆಯಿತು. ಅಪರಾಹ್ನ 3.00 ಗಂಟೆಗೆ ಅಧ್ಯಕ್ಷ ಶ್ರೀ ದಿನಕರಶೆಟ್ಟಿ ಇವರ ಅಧ್ಯಕ್ಷತೆಯಲ್ಲಿ ಮಹಾ ಸಭೆಯು ಜರುಗಿತು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ರಾಮಮೊಗೇರಿ, ತಾಲೂಕು ದೈಹಿಕ ಶಿಕ್ಷಣ ಸಂಯೋಜಕ ಶ್ರೀ ದಿನಕರ ಹೆಗ್ಡೆ, ಸಹ ಜಿಲ್ಲಾ ಆಯುಕ್ತರಾದ ಶ್ರೀ ಸದಾಶಿವಭಟ್ಟ, ಶ್ರೀಮತಿ ಗುಣರತ್ನ, ಉಪಾಧ್ಯಕ್ಷರಾದ ಶ್ರೀ ಸರ್ವೋತ್ತಮಶೆಟ್ಟಿ, ಶ್ರೀ ವಿಶ್ವನಾಥ ಹವಾಲ್ದಾರ್, ಶ್ರೀಮತಿ ಉಷಾ ಶೆಟ್ಟಿ, ಜಿಲ್ಲಾ ಆಯುಕ್ತ ಶ್ರೀ ಎಡ್ವಿನ್ ಆಳ್ವ, ಸಂಘಟನಾ ಆಯುಕ್ತ ಶ್ರೀ ಆನಂದ ಅಡಿಗ, ತರಬೇತಿ ಆಯುಕ್ತರಾದ ಶ್ರೀ ಕೊಗ್ಗಗಾಣಿಗ, ಸಿ।। ಬಿಬಿಯಾನ ಮೊದಲಾದವರಲ್ಲದೆ, ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಹಾಸನ ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಆಗಸ್ಟ್ 15, 2006 ರಂದು ಜಿಲ್ಲಾ ಸ್ಕೌಟ್ಸ್- ಗೈಡ್ಸ್ ಸಮುದಾಯ ಭವನದಲ್ಲಿ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಲಾಯಿತು. ನಗರ ಶಾಲೆಗಳ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದು, ಶ್ರೀ ವೈ.ಎಸ್. ವೀರಭದ್ರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರು, ಹಾಸನ ಇವರು ಧ್ವಜಾರೋಹಣ ಕಾರ್ಯಕ್ರಮವನ್ನು ನೆರವೇರಿಸಿದರು.

ಹಾಸನ ಜಿಲ್ಲಾಡಳಿತದ ವತಿಯಿಂದ ಏರ್ಪಡಿಸಿದ ಸ್ವಾತಂತ್ರ್ಯ ದಿನಾಚರಣೆಯ ಪಥ ಸಂಚಲನದಲ್ಲಿ ಹಾಸನ ನಗರ ಶಾಲೆಗಳ ಏಳು ಸ್ಕೌಟ್ಸ್-ಗೈಡ್ಸ್ ದಳಗಳು ಭಾಗವಹಿಸಿದ್ದವು. ಕರ್ನಾಟಕ ಸರ್ಕಾರದ ಲೋಕೋಪಯೋಗಿ ಮತ್ತು ಇಂಧನ ಸಚಿವರಾದ ಸನ್ಮಾನ್ಯ ಶ್ರೀ ಎಚ್.ಡಿ. ರೇವಣ್ಣರವರು ಧ್ವಜಾರೋಹಣ ನೆರವೇರಿಸಿ ಸ್ಕೌಟ್ಸ್ - ಗೈಡ್ಸ್‌ಗಳಿಂದ ವಂದನೆ ಸ್ವೀಕರಿಸಿದರು.

ಉತ್ತಮ ಪಥ ಸಂಚಲನ ನೀಡಿದ ಹಾಸನ ಸೆಂಟ್ ಜೋಸೆಫ್ ಪ್ರೌಢಶಾಲೆಯ ಗೈಡ್ಸ್ ತಂಡಕ್ಕೆ ಹಾಗೂ ಆದಿಚುಂಚನಗಿರಿ ಪ್ರೌಢಶಾಲೆಯ ಸ್ಕೌಟ್ಸ್ ತಂಡಕ್ಕೆ ಪ್ರಥಮ ಬಹುಮಾನವನ್ನು ಮಾನ್ಯ ಲೋಕೋಪಯೋಗಿ ಸಚಿವರು ನೀಡಿ ಗೌರವಿಸಿದರು.

ಈ ಸಂದರ್ಭದಲ್ಲಿ ಹಾಸನ ಜಿಲ್ಲೆಯಿಂದ ರಾಷ್ಟ್ರಪತಿ ಸ್ಕೌಟ್ ಪದಕ ಪಡೆದ ಎ.ಸಿ. ಮಂಜುನಾಥ ದಿಲೀಪ್ ಬಿನ್. ಎ.ಡಿ. ಚಂದ್ರಶೇಖರ್, ಆನಂದ್‌ಕುಮಾರ್ ಎಚ್.ಇ. ಬಿನ್. ಈಶ್ವರಪ್ಪ, ಅಜಯ್ ಬಿನ್. ನಿಂಗಪ್ಪ, ನಿಶಾಂತಿ ಕೆ. ಬಿನ್. ಶ್ರೀ ಬಿ. ದೇವರಾಜು, ಚೇತನ ಶ್ರೀ ಪಿ. ಬಿನ್. ತಮ್ಮೇಗೌಡ, ಇವರುಗಳಿಗೆ ಮಾನ್ಯ ಸಚಿವರಾದ ಎಚ್.ಡಿ. ರೇವಣ್ಣರವರು ಸನ್ಮಾನಿಸಿ ಗೌರವಿಸಿದರು.

♣ ♣

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಹೊಳೆನರಸೀಪುರ ಮತ್ತು ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಜಿ. ಸೋಮನಹಳ್ಳಿ ಮತ್ತು ಸರ್ಕಾರಿ ಪ್ರೌಢ ಶಾಲೆ ಮೂಡಲಹಿಪ್ಪೆ ಇವರುಗಳ ಸಂಯುಕ್ತ ಆಶ್ರಯದಲ್ಲಿ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್‌ಗಳ ಶಿಬಿರವಾಸ ಕಾರ್ಯಕ್ರಮವನ್ನು ಜಿ. ಸೋಮನಹಳ್ಳಿ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಯ ಆವರಣದಲ್ಲಿ ದಿನಾಂಕ 19-8-2006 ರಿಂದ 21-8-2006ರವರೆಗೆ ಏರ್ಪಡಿಸಲಾಗಿತ್ತು.

ಈ ಶಿಬಿರದಲ್ಲಿ ತಾಲ್ಲೂಕಿನಾದ್ಯಂತ 40 ಗೈಡ್ಸ್‌ಗಳು, 90 ಸ್ಕೌಟ್ಸ್‌ಗಳು ಭಾಗವಹಿಸಿ ಶಿಬಿರವಾಸ ತರಬೇತಿ ಪಡೆದಿರುವರು. ಶಿಬಿರದ ಉದ್ಘಾಟನೆಯನ್ನು ಹೊಳೆನರಸೀಪುರ ತಾಲ್ಲೂಕು ಪಂಚಾಯ್ತಿ ಮಾಜಿ ಅಧ್ಯಕ್ಷರು ಹಾಗೂ ಹಾಲಿ ಸದಸ್ಯರಾದ ಶ್ರೀ ಮಲ್ಲಿಕಾರ್ಜುನ್‌ರವರು ಉದ್ಘಾಟಿಸಿದರು.

ಶ್ರೀ ರಾಜಣ್ಣ ಮೂಡಲಹಿಪ್ಪೆ ಗ್ರಾಮ ಪಂಚಾಯ್ತಿ ಅಧ್ಯಕ್ಷರು ಸದಸ್ಯರಾದ ಶ್ರೀಮತಿ ಸಾವಿತ್ರಮ್ಮ ಶ್ರೀ ಎನ್. ಶೇಖರ್, ಅಧ್ಯಕ್ಷರು ಶಾಲಾಭಿವೃದ್ಧಿ ಸಮಿತಿ ಜಿ. ಸೋಮನಹಳ್ಳಿ, ಶ್ರೀ ರಂಗೇಗೌಡರು, ಮೂಡಲಹಿಪ್ಪೆ ಸರ್ಕಾರಿ ಪ್ರೌಢಶಾಲಾ ಎಸ್.ಡಿ.ಎಂ.ಸಿ. ಅಧ್ಯಕ್ಷರು ಮುಂತಾದವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಸ್ಕೌಟ್ಸ್-ಗೈಡ್ಸ್ ಮಕ್ಕಳಿಗೆ ಶುಭ ಹಾರೈಸಿದರು.

ದಿನಾಂಕ 21-08-2006 ರಂದು ಬೆಳಿಗ್ಗೆ 9 ಗಂಟೆಗೆ ಶಿಬಿರದ ಮುಕ್ತಾಯ ಸಮಾರಂಭವನ್ನು ಶ್ರೀ ಕಾಡ, ಅಧ್ಯಕ್ಷರು, ಗ್ರಾಮ ಪಂಚಾಯ್ತಿ ಮೂಡಲಹಿಪ್ಪೆ ಇವರ ಅಧ್ಯಕ್ಷತೆಯಲ್ಲಿ ನಡೆಯಿತು ಮತ್ತು ಈ ಸಂದರ್ಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಹೊಳೆನರಸೀಪುರ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಚ್.ಕೆ. ಪಾಂಡುರವರು ಮಾತನಾಡಿದರು.

♣ ♣

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಗೆ ಚತುರ್ಥಚರಣ ಮತ್ತು ಹೀರಕ್ ಪಂಖ್ ಬುಲ್‌ಬುಲ್ಸ್‌ಗಳಿಗೆ ಪೂರ್ವ ಸಿದ್ಧತಾ ತರಬೇತಿ ಶಿಬಿರವನ್ನು ಹಾಸನ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ದಿನಾಂಕ 30-08-2006 ಮತ್ತು 31-08-2006ರಂದು ಎರಡು ದಿನಗಳು ಏರ್ಪಡಿಸಲಾಗಿತ್ತು.

ಈ ಶಿಬಿರದಲ್ಲಿ ಹಾಸನ ಜಿಲ್ಲಾದ್ಯಂತ ಚತುರ್ಥಚರಣ ಮತ್ತು ಹೀರಕ್ ಪಂಕ್ ಪ್ರಶಸ್ತಿಗಾಗಿ ನೊಂದಾಯಿಸಿದ 35 ಬುಲ್‌ಬುಲ್ಸ್ ಹಾಗೂ 20 ಕಬ್ಸ್‌ಗಳು ಭಾಗವಹಿಸಿದ್ದರು.

♣ ♣

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಜಿಲ್ಲಾ ಸಂಸ್ಥೆಯ ವತಿಯಿಂದ ಜಿಲ್ಲಾ ಮಟ್ಟದ ರಾಜ್ಯ ಪುರಸ್ಕಾರ ಪೂರ್ವ ಸಿದ್ಧತಾ ತರಬೇತಿಯನ್ನು ಸ್ಕೌಟ್ಸ್-ಗೈಡ್ಸ್‌ಗಳಿಗಾಗಿ ದಿನಾಂಕ 2.9.2006 ರಿಂದ 3.9.2006ರ ವರೆಗೆ ಹಾಸನ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದಲ್ಲಿ ಏರ್ಪಡಿಸಲಾಗಿತ್ತು.

ಈ ತರಬೇತಿ ಶಿಬಿರದಲ್ಲಿ ಹಾಸನ ಜಿಲ್ಲಾದ್ಯಂತ 110 ಸ್ಕೌಟ್ಸ್-ಗೈಡ್ಸ್ ಮಕ್ಕಳು ಜಿಲ್ಲೆಯ ವಿವಿಧ ಶಾಲೆಗಳಿಂದ ಆಗಮಿಸಿದ್ದರು. ಶ್ರೀ ಎಂ.ಎಸ್. ಪ್ರಕಾಶ್, ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಸನ ಶಿಬಿರದ ನಾಯಕರಾಗಿದ್ದರು. ಹಾಗೂ ಗೈಡ್ ವಿಭಾಗಕ್ಕೆ ಕಾಂಚನ ಮಾಲಾ ಗೈಡ್ ಕ್ಯಾಪ್ಟನ್ ಬಿ. ಸಿದ್ದಣ್ಣಯ್ಯ ಪ್ರೌಢಶಾಲೆ ಬಾಳ್ಳುಪೇಟೆ ಇವರು ನಾಯಕಿಯಾಗಿದ್ದರು.

ಶಿಬಿರದ ಉದ್ಘಾಟನಾ ಸಮಾರಂಭವು ದಿನಾಂಕ : 2-9-2006 ರಂದು ನಡೆಯಿತು. ಶಿಬಿರದ ಉದ್ಘಾಟನೆಯನ್ನು ಹೊಳೆನರಸೀಪುರ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಆದ ಶ್ರೀ ಎಚ್.ಬಿ. ಸದಾಶಿವಶೆಟ್ಟರು ಉದ್ಘಾಟಿಸಿದರು. ಶಿಬಿರದ ಸಮಾರೋಪ ಸಮಾರಂಭವು ದಿನಾಂಕ : 3-9-2006 ರಂದು ಭಾನುವಾರ ಸಂಜೆ 4 ಗಂಟೆಗೆ ಶ್ರೀ ಎಚ್.ಬಿ. ಸದಾಶಿವಶೆಟ್ಟರ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾಗಿತ್ತು.

## ಬೆಳಗಾಂ ಜಿಲ್ಲೆ

ಬೆಳಗಾವಿ ನೆಹರು ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ ಸಮಾರಂಭ ಮತ್ತು ಪರೇಡ್‌ನಲ್ಲಿ ಜಿಲ್ಲಾ ಸಂಸ್ಥೆ ಪರವಾಗಿ ಮೂರು ಸ್ಕೌಟ್ಸ್ ತಂಡಗಳು ಎರಡು ಗೈಡ್ಸ್ ತಂಡಗಳು ಭಾಗವಹಿಸಿದ್ದವು.

ಮಾನ್ಯ ತೋಟಗಾರಿಕೆ ಸಚಿವರು ಹಾಗೂ ಬೆಳಗಾವಿ ಜಿಲ್ಲಾ ಉಸ್ತುವಾರಿ ಸಚಿವರಾದ ಸನ್ಮಾನ್ಯ ಶ್ರೀ ಶಶಿಕಾಂತ ಅ. ನಾಯಕ ಅವರು ಸಮಾರಂಭದಲ್ಲಿ ಭಾಗವಹಿಸಿ ಧ್ವಜಾರೋಹಣ ಮಾಡಿದರು.

ಪಂಥಸಂಚಲದಲ್ಲಿ ಬೆಳಗಾವಿ ಮಿಲಿಟರಿ ಶಾಲೆಯ ಸ್ಕೌಟ್ಸ್ ಬಾಲಕರ ತಂಡಕ್ಕೆ ಪ್ರಥಮ ಸ್ಥಾನ ಲಭಿಸಿತು. ತಂಡದ ನಾಯಕನಿಗೆ ಸನ್ಮಾನ್ಯ ಸಚಿವರು ಪಾರಿತೋಷಕವನ್ನು ಪ್ರದಾನ ಮಾಡಿದರು.

☘ ☘

ಶ್ರೀ ಫಲಾಹಾರ ಶಿವಯೋಗೀಶ್ವರ ಸಂಯುಕ್ತ ಮಹಾವಿದ್ಯಾಲಯದ ಶ್ರೀ ಫಲಾಹಾರೇಶ್ವರ ಸ್ಕೌಟ್ ಟ್ರೂಪ್ ಹಾಗೂ ರಾಣಿ ಚೆನ್ನಮ್ಮ ಗೈಡ್ ಟ್ರೂಪಿನ ಎಲ್ಲ ಸ್ಕೌಟ್ಸ್, ಗೈಡ್ಸ್ ವಿದ್ಯಾರ್ಥಿ ವಿದ್ಯಾರ್ಥಿನಿಯರು ದಿನಾಂಕ 15-08-2006 ರಂದು ನಡೆದ "59ನೇ ಸ್ವಾತಂತ್ರ ದಿನಾಚರಣೆ"ಯಲ್ಲಿ ಸಂಪೂರ್ಣ ಸಮವಸ್ತ್ರದೊಂದಿಗೆ ಶಿಸ್ತಿನಿಂದ ಧ್ವಜಾರೋಹಣ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಪಥಸಂಚಲನ ಮಾಡಿದರು.

☘ ☘

ಜಿಲ್ಲಾ ಆಡಳಿತ ಮಂಡಳಿಯವರು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ಬೆಳಗಾವಿ ಇವರು ದಿನಾಂಕ 20-8-2006 ರಂದು ಡಿ.ಸಿ. ಕಾಂಪೌಂಡ್, ಬೆಳಗಾವಿ ಇಲ್ಲಿ ದಿ|| ರಾಜೀವ್ ಗಾಂಧಿಯವರ ಅಕ್ಷಯ ಊರ್ಜಾ ದಿನಾಚರಣೆಯನ್ನು ಮಾನ್ಯ ಡಾ|| ಶಾಲಿನ ರಜನೀಶ್, ಭಾ.ಜ.ಸೇ. ಜಿಲ್ಲಾಧಿಕಾರಿಗಳು, ಮಾನ್ಯ ಪಿ.ಡಿ. ಗೋರಬಾಳ ಅಧ್ಯಕ್ಷರು ಜಿಲ್ಲಾ ಪಂಚಾಯತ್ ಮಾನ್ಯಶ್ರೀ ಎಂ.ಇ. ಶಿವಲಿಂಗಮೂರ್ತಿ, ಸಿ.ಇ.ಓ. ಬೆಳಗಾವಿ ಹಾಗೂ ಇತರ ಗಣ್ಯಮಾನ್ಯರ ಉಪಸ್ಥಿತಿಯಲ್ಲಿ ಆಚರಿಸಿದರು. ಈ ಸಂದರ್ಭದಲ್ಲಿ ಹಮ್ಮಿಕೊಂಡಿದ್ದ ಪಥಚಲನದಲ್ಲಿ ರೂಟಮಾರ್ಚ್ 150 ಸ್ಕೌಟ್ಸ್, ಗೈಡ್ಸ್, ಸ್ಕೌಟರ್ಸ್, ಗೈಡರ್ಸ್, ಭಾಗವಹಿಸಿದ್ದರು.

ದಿನಾಂಕ 31-8-2006 ರಂದು - ಸರಕಾರಿ ಹಿರಿಯ ಪ್ರಾಥಮಿಕ ಗಂಡು ಮಕ್ಕಳ ಶಾಲೆ ಕೋಟೆ ಭಾಗ ಹುಕ್ಕೇರಿ ಇಲ್ಲಿ ಹುಕ್ಕೇರಿ ತಾಲೂಕಾ ಸ್ಕೌಟರ್ಸ್ ಮತ್ತು ಗೈಡರ್ಸ್ ಶಿಕ್ಷಕ-ಶಿಕ್ಷಕಿಯರ ಸಮಾವೇಶ ನಡೆಯಿತು. ಒಟ್ಟು 220 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

ಶ್ರೀ ಬಿ.ವೈ. ನಾಯಿಕ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುಕ್ಕೇರಿ ಇವರ ಅಧ್ಯಕ್ಷತೆಯಲ್ಲಿ ಈ ಸಮಾರಂಭ ಜರುಗಿತು.

☘ ☘

**ರಾಮದುರ್ಗ :** ಸರ್ಕಾರಿ ಮಾದರಿ ಕನ್ನಡ ಹೆಣ್ಣು ಮಕ್ಕಳ ಶಾಲೆಯ ಗೈಡ್ಸ್ ವಿದ್ಯಾರ್ಥಿನಿಯರು 60ನೇ ಸ್ವಾತಂತ್ರೋತ್ಸವದ ಕಾರ್ಯಕ್ರಮದಲ್ಲಿ ಪ್ರಭಾತ್ ಫೇರಿಯೊಂದಿಗೆ ಭಾಗವಹಿಸಿರುತ್ತಾರೆ. ಅಲ್ಲದೆ ಜನರ ಮೆಚ್ಚುಗೆಯಿಂದ ಶಾಲೆಗೆ ಕೀರ್ತಿ ತಂದಿದ್ದಾರೆ.

ದಿನಾಂಕ 20-08-2006 ರಂದು ರಾಜೀವ್ ಗಾಂಧಿ ಅಕ್ಷಯ ಉರ್ಜಾ ದಿನಾಚರಣೆಯಂದು ಮಾನ್ಯ ತಹಶಿಲ್ದಾರ್ ಸಾಹೇಬರ ಕಚೇರಿಯಿಂದ ಪ್ರಾರಂಭವಾದ ಭವ್ಯ ಮೆರವಣಿಗೆಯಲ್ಲಿ ಪಾಲ್ಗೊಂಡು ಎಲ್ಲ ಅಧಿಕಾರಿಗಳ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

## ಮೈಸೂರು ಗ್ರಾಮಾಂತರ ಜಿಲ್ಲೆ

ಸಂತೆ ಸರಗೂರು ಲಯನ್ಸ್ ಅಕಾಡೆಮಿ ಶಾಲೆಯ ಸ್ಕೌಟ್‌ಗಳು ಹುಲಿಕಾರ ಶ್ರೀ ವೇಣುಗೋಪಾಲ ಸ್ವಾಮಿ ದೇವಾಲಯಾದ ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ತೇರಣವಾಂಟಿ ಶಿವ ದೇವಾಲಯದಲ್ಲಿ ನಡೆದ ಸಮಾಜ ಸೇವೆ ಕಾರ್ಯಕ್ರಮದಲ್ಲಿ ಶಾಲೆಯ ಸ್ಕೌಟ್‌ಗಳು ಭಾಗವಹಿಸಿದ್ದರು.

## ದಕ್ಷಿಣ ಕನ್ನಡ ಜಿಲ್ಲೆ

ಸಾರ್ವಜನಿಕ ಶಿಕ್ಷಣ ಇಲಾಖೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಮಂಗಳೂರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಬೆಳ್ತಂಗಡಿ ಮತ್ತು ಶ್ರೀ ಧ.ಮಂ. ಶಿಕ್ಷಣ ಸಂಸ್ಥೆಗಳು, ಉಜಿರೆ ಇವರ ಸಂಯುಕ್ತ ಆಶ್ರಯದಲ್ಲಿ, ಸ್ಕೌಟಿಂಗ್ ಶತಮಾನೋತ್ಸವ ವರ್ಷದ ಶುಭ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಮಟ್ಟದ ಹಿಮಾಲಯ ವೃಕ್ಷಮಣಿಧಾರಕರ ಸಮಾವೇಶವು ಸಪ್ಟೆಂಬರ್ 2 ಮತ್ತು 3 ರಂದು ಶ್ರೀ ಧ.ಮ.ಹಿ.ಪ್ರಾ. ಶಾಲೆ, ಉಜಿರೆ ಇಲ್ಲಿ ನಡೆಯಿತು. ಈ ಒಂದು ಸುಂದರ ಸಮ್ಮಿಲನ ಸಮಾರಂಭದ ಉದ್ಘಾಟನೆಯನ್ನು ಡಾ|| ಬಿ. ಯಶೋವರ್ಮ ಕಾರ್ಯದರ್ಶಿಗಳು, ಶ್ರೀ ಧ.ಮ.

ಎಜ್ಯುಕೇಶನ್ ಸೊಸೈಟಿ ಇವರು ತಮ್ಮ ಅಮೃತ ಹಸ್ತದಿಂದ ದೀಪ ಬೆಳಗಿಸುವುದರ ಮೂಲಕ ವಿಧ್ಯುಕ್ತವಾಗಿ ಉದ್ಘಾಟಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಬೆಳ್ತಂಗಡಿ ಇದರ ಅಧ್ಯಕ್ಷರಾದ ಶ್ರೀಯುತ ಬಿ. ರಮಾನಂದ ಸಾಲಿಯಾನ್‌ರವರು ವಹಿಸಿಕೊಂಡು ಈ ಸಮಾವೇಶದ ಸದುಪಯೋಗವನ್ನು ಪಡೆದುಕೊಳ್ಳುವಂತೆ ತಿಳಿಸಿದರು. ಸಮಾರಂಭದ ಮುಖ್ಯ ಅತಿಥಿಯಾದ ವಂದನೀಯ ಫಾ|| ಫರ್ಡಿನಾಂಡ್ ಗೊನ್ಸಾಲ್ವೆಸ್, ಧರ್ಮಗುರುಗಳು, ಸಂಚಾಲಕರು, ಅನುಗ್ರಹ ಶಿಕ್ಷಣ ಸಂಸ್ಥೆ ಉಜಿರೆ ಇವರು ಸಮಾವೇಶಕ್ಕೆ ಶುಭ ಹಾರೈಸಿದರು. ಶ್ರೀಯುತ ಬಿ.ಜಿ. ವಾರಂಬಳ್ಳಿಯವರು ಶ್ರೀ ಕೆ. ತಿಮ್ಮಪ್ಪ, ರಾಜ್ಯಸ್ಥಾನೀಯ ಆಯುಕ್ತರು (ತರಬೇತಿ) ಭಾರತ್ ಸ್ಕೌಟ್ಸ್ ಗೈಡ್ಸ್, ರಾಜ್ಯ ಸಂಸ್ಥೆ, ಕರ್ನಾಟಕ ಇವರು ಹಿಮಾಲಯ ವೃಕ್ಷಮಣಿಧಾರಕರಿಗೆ ಪದಕ ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ಶಾಲಾ ಮುಖ್ಯೋಪಾಧ್ಯಾಯರಾದ ಪ್ರಸನ್ನಕುಮಾರ್‌ರವರು ಸಂದೇಶ ವಾಚಿಸಿದರು.

ವೇದಿಕೆಯಲ್ಲಿದ್ದ ಎಸ್.ಒ.ಸಿ. ನಾರಾಯಣಶೆಟ್ಟಿ ಇವರು, ಸ್ಮರಣ ಸಂಚಿಕೆ "ಸ್ಪಂದನ" ಬಿಡುಗಡೆ ಮಾಡಿದರು. ಕ್ಷೇತ್ರದರ್ಶನ ಸಂದರ್ಭದಲ್ಲಿ ಕ್ಷೇತ್ರದ ಶ್ರೀ ಡಿ. ಹರ್ಷೇಂದ್ರ ಹೆಗಡೆ ಮಾಹಿತಿ ನೀಡಿದರು. ದಿನಾಂಕ 3-9-2006 ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀಮತಿ ಮಂಜುಳ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ, ರಾಜ್ಯ ಸ್ಥಾನೀಯ ಆಯುಕ್ತ ಶ್ರೀ ಕೆ. ತಿಮ್ಮಪ್ಪ, ಸದ್ರಿ ಕಾಲೇಜಿನ ಪ್ರಭಾರ ಪ್ರಾಂಶುಪಾಲ ಶ್ರೀ ಸುಜಯ್, ಶ್ರೀ ನಾರಾಯಣಶೆಟ್ಟಿ, ಎಸ್.ಓ.ಸಿ. (ಸ್ಕೌಟ್), ಶ್ರೀ ಗುರುಮೂರ್ತಿ, ಶ್ರೀ ಆನಂದ ಅಡಿಗ ಅಲ್ಲದೆ, ಸ್ಥಳೀಯ ಶಾಲಾ ಮುಖ್ಯೋಪಾಧ್ಯಾಯ ಶ್ರೀ ಪ್ರಸನ್ನಕುಮಾರ್, ಜಿಲ್ಲಾಯ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು, ಉಪಸ್ಥಿತರಿದ್ದರು.

## ಬೆಂಗಳೂರು ಉತ್ತರ ಜಿಲ್ಲೆ

**ಶಾಲಾ ಮುಖ್ಯಸ್ಥರಿಗೆ ಮಾಹಿತಿ ಶಿಬಿರ :** ಬೆಂಗಳೂರು ಉತ್ತರ ಜಿಲ್ಲಾ ಸಂಸ್ಥೆಯು ದಿನಾಂಕ 11-09-2006 ರಂದು ರಾಜ್ಯ ಕಾರ್ಯಾಲಯದಲ್ಲಿ ಶಾಲಾ ಮುಖ್ಯೋಪಾಧ್ಯಾಯರುಗಳಿಗೆ ಸ್ಕೌಟಿಂಗ್ ಮತ್ತು ಗೈಡಿಂಗ್ ಬಗ್ಗೆ ಮಾಹಿತಿ ಶಿಬಿರವನ್ನು ಏರ್ಪಡಿಸಿದರು. ವಿವಿಧ ಶಾಲೆಗಳಿಂದ 45 ಶಾಲಾ ಮುಖ್ಯಸ್ಥರುಗಳು, ಉಪಾಧ್ಯಾಯರುಗಳು ಭಾಗವಹಿಸಿದ್ದರು.

ಜಿಲ್ಲಾ ಆಯುಕ್ತರುಗಳಾದ ಶ್ರೀ ಪ್ರೇಮ್‌ಕುಮಾರ್, ಶ್ರೀಮತಿ ರಾಮಲತ, ಜಿಲ್ಲಾ ಕಾರ್ಯದರ್ಶಿ, ಶ್ರೀ ಬಿ.ಕೆ. ಶೇಷಾದ್ರಿ, ಶ್ರೀಮತಿ ವಿ. ಸುರಭಿ, ಶ್ರೀಮತಿ ಬಿ. ರೇವತಿ, ಇವರೆಲ್ಲರೂ ಶಿಬಿರವನ್ನು ವ್ಯವಸ್ಥಿತವಾಗಿ ಸಂಘಟಿಸಿದರು. ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀಮತಿ ಗೀತಾ ನಟರಾಜ್, ಶ್ರೀ ಕೆ. ತಿಮ್ಮಪ್ಪ, ಶ್ರೀಮತಿ ಜಾನಕಿ ವೇಣುಗೋಪಾಲ್, ಶ್ರೀ ನಾರಾಯಣ ಶೆಟ್ಟಿ, ಶ್ರೀ ಮಾಧವಸಿಂಗ್, ಶ್ರೀ ಎಂ. ಶ್ರೀನಿವಾಸ್ ಇತರ ಪದಾಧಿಕಾರಿಗಳು ಭಾಗವಹಿಸಿದ್ದರು.

## ಗದಗ ಜಿಲ್ಲೆ

ಸ್ಕೌಟರ್ಸ್ ಗೈಡರ್ಸ್ ಸಮಾವೇಶ : ಗದಗ ಜಿಲ್ಲಾ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ದಿನಾಂಕ 6-9-2006 ರಂದು ವ್ಹಿ.ಡಿ. ಎಸ್.ಟಿ.ಸಿ., ಪದವಿ ಪೂರ್ವ ಕಾಲೇಜ್ ಗದಗ ಇಲ್ಲಿ ಜರುಗಿತು. ಸಮಾವೇಶಕ್ಕೆ 95 ಸ್ಕೌಟರ್ಸ್, 45 ಗೈಡರ್ಸ್, 8 ಫ್ಲಾಕ್ ಲೀಡರ್ಸ್, 5 ಕಬ್ ಮಾಸ್ಟರ್ಸ್ ಹಾಜರಿದ್ದರು. ಬೆಳಿಗ್ಗೆ 10.00 ಗಂಟೆಗೆ ಪ್ರಾರಂಭೋತ್ಸವ ಜರುಗಿತು. ಸ್ಥಾನಿಕ ಪ್ರಾಚಾರ್ಯರಾದ ಶ್ರೀ ಸಿ.ಎಂ. ಕಟ್ಟಿಮನಿಯವರು ಅಧ್ಯಕ್ಷರಾಗಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಮುಕುಂದ ಎಸ್. ಪೊತ್ನಿಸ್, ಜಿಲ್ಲಾ ಆಯುಕ್ತರು ಸ್ಕೌಟ್ಸ್, ಶ್ರೀ ಶ್ರೀನಿವಾಸ ಹುಯಿಲಗೋಳ, ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರು. ಶ್ರೀ ಡಬ್ಲ್ಯೂ. ಕುಲಕರ್ಣಿ, ಪ್ರಾಚಾರ್ಯರು ಬಿ.ಎಡ್. ಕಾಲೇಜ್ ಗದಗ ಆಗಮಿದ್ದರು. ಶ್ರೀ ಬಿ.ಎ. ವಸ್ತ್ರದ, ಡಿ.ಓ.ಸಿ. ಶ್ರೀಮತಿ ಬಿ.ಡಿ. ಪವಾರ್, ಡಿ.ಟಿ.ಸಿ.(ಜಿ), ಶ್ರೀಮತಿ ಹುಲಸೂರ, ಶ್ರೀಮತಿ ಮುಳಗುಂದ. ಶ್ರೀ ಅಂಕಲಿ, ಎಸ್.ಆಯ್, ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯನಿರ್ವಹಿಸಿದರು.

♣ ♣

ದಿನಾಂಕ 9-9-2006 ರಂದು ಗದಗ ಗ್ರಾಮೀಣ ವಲಯದ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಮುಖ್ಯ ಗುರುಗಳ

ಸಮಾವೇಶವನ್ನು ಗದಗ ತಾಲೂಕಿನ ಹಿ. ಪ್ರಾ.ಶಾ.ಸಂ. ಅಂತೂರ ಬೆಂತೂರಲ್ಲಿ ನಡೆಯಿಸಲಾಯಿತು. 75 ಮುಖ್ಯೋಪಾಧ್ಯಾಯರು, 15 ಮುಖ್ಯೋಪಾಧ್ಯಾಯಿನಿಯರು ಭಾಗವಹಿಸಿದ್ದರು. ಬೆಳಿಗ್ಗೆ 10 ಗಂಟೆಗೆ ಉದ್ಘಾಟನಾ ಸಮಾರಂಭಕ್ಕೆ ಶ್ರೀ ಟಿ.ಎ. ರಂಗಣ್ಣನವರ ಎಸ್.ಡಿ.ಎಂ.ಸಿ. ಅಧ್ಯಕ್ಷರು, ಅಧ್ಯಕ್ಷತೆ ವಹಿಸಿದ್ದು, ಶ್ರೀ ಪ್ರಕಾಶಗೌಡ ಪಾಟೀಲ ಉದ್ಘಾಟಿಸಿದರು. ಶ್ರೀ ಬಿ.ಎ. ವಸ್ತ್ರದ ಡಿ.ಓ.ಸಿ.ಯವರು ಶ್ರೀ ಬಿ.ಬಿ. ಹೂಗಾರ, ಶ್ರೀ ಬಿ.ಡಿ. ಕಿಲಬನವರ ಉಪನ್ಯಾಸ ನೀಡಿದರು. ಶ್ರೀ ಎಂ.ಎ. ರಡ್ಡೇರ, ಬಿ.ಇ.ಓ., ಗದಗ ಗ್ರಾಮೀಣ ವಲಯ, ಶ್ರೀ ಎಂ.ಎಸ್. ಹಿರೇಮಠ, ಅಧ್ಯಕ್ಷರು, ಜಿಲ್ಲಾ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ, ಗದಗ ತಾಲೂಕಾ ಸಂಸ್ಥೆಯ ಅಧ್ಯಕ್ಷರು ಮತ್ತು ಸದಸ್ಯರು ಉಪಸ್ಥಿತರಿದ್ದರು. ಶ್ರೀ ವ್ಹಿ.ಬಿ. ಪೋಲಿಸ್ ಪಾಟೀಲ ನಿರೂಪಣೆ ಮಾಡಿದರು.

## ರಾಯಚೂರು ಜಿಲ್ಲೆ

ಭಾರತ್ ಸ್ಕೌಟ್ಸ್ ಗೈಡ್ಸ್ ಕರ್ನಾಟಕ ಜಿಲ್ಲಾ ಸಂಸ್ಥೆ ರಾಯಚೂರು ಮತ್ತು ತಾಲೂಕು ಸಂಸ್ಥೆ ಸಿಂಧನೂರು ಇವರ ಸಂಯುಕ್ತ ಆಶ್ರಯದಲ್ಲಿ ದಿನಾಂಕ 16-8-2006 ರಿಂದ 25-8-2006ರ ವರೆಗೆ ಮೂಲ ತರಬೇತಿ ಶಿಬಿರವನ್ನು ಸಿಂಧನೂರ ತಾಲೂಕಿನ ಅಂಬಾಮಠದಲ್ಲಿ ಹಮ್ಮಿಕ್ಕೊಳ್ಳಲಾಗಿತ್ತು.

ಉದ್ಘಾಟನೆಯನ್ನು ಸಿಂಧನೂರ ಶಾಸಕರಾದ ಶ್ರೀ ಹಂಪನಗೌಡ ಬಾದರ್ಲಿಯವರು ದೀಪ ಬೆಳಗಿಸುವದರ ಮೂಲಕ ನೆರವೇರಿಸಿದರು. ಮುಖ್ಯ ಅತಿಥಿಗಳಾದ ಶ್ರೀ ಭೀಮಣ್ಣ ಕೋಲಾರ, ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಭಾಗವಹಿಸಿದ್ದರು. ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ಶರಣೇಗೌಡ ತಾಲೂಕು ಸಂಸ್ಥೆ ಅಧ್ಯಕ್ಷರು, ಶಿಕ್ಷಕರು ಇಲ್ಲಿ ಪಡೆದ ತರಬೇತಿಯ ವಿಷಯ ಶಾಲೆಯ ಎಲ್ಲಾ ಮಕ್ಕಳಿಗೆ ಕಲಿಸಬೇಕು ಎಂದರು.

ಸ್ಕೌಟ್ಸ್ ವಿಭಾಗದಲ್ಲಿ ತರಬೇತಿ ನಾಯಕರಾಗಿ ಶ್ರೀ ಡಿ. ಬಸವರಾಜ, ಕಬ್ಸ್ ವಿಭಾಗಕ್ಕೆ ಶ್ರೀಮತಿ ಜೂಲಿಯಾನ ಲಸ್ರಾಡೋ, ಸಹಾಯಕರಾಗಿ ಶ್ರೀ ವಾಮದೇವಪ್ಪ (ಸ್ಕೌಟ್ಸ್), ಶ್ರೀ ಮೋಹನಕುಮಾರ (ಕಬ್ಸ್), ಶ್ರೀಮತಿ ಕೆ.ಕೆ. ಲೀಲಾ, ರಾಜ್ಯ ತರಬೇತಿ ಆಯುಕ್ತೆ (ಗೈಡ್ಸ್) ಇವರು ಗೈಡ್ಸ್ ವಿಭಾಗದ ನಾಯಕಿಯಾಗಿ ಭಾಗವಹಿಸಿದ್ದರು.

**ಶಿಬಿರದ ಸಮಾರೋಪ :** ದಿನಾಂಕ 24-8-2006 ರಂದು ಶ್ರೀ ಅಂಬಾದೇವಿ ಕಲ್ಯಾಣ ಮಂಟಪದಲ್ಲಿ ನಡೆಯಿತು. ಅಧ್ಯಕ್ಷತೆಯನ್ನು ಶ್ರೀ ಪರಮೇಶ್ವರಪ್ಪ ಸಾಹುಕಾರ ಅಧ್ಯಕ್ಷರು ತಾಲೂಕು ಪಂಚಾಯತ್ ಸದಸ್ಯರು, ಸ್ಕೌಟ್ಸ್-ಗೈಡ್ಸ್ ಸಮಾಜ ಸೇವೆಯಲ್ಲಿ ತೊಡಗಲಿ ಸಮಾಜಕ್ಕೆ ಮಾದರಿಯಾಗಲೆಂದರು. ಮುಖ್ಯ ಅತಿಥಿಯಾಗಿ ಶ್ರೀ ರಾಜಶೇಖರ ಪಾಟೀಲ ಅಧ್ಯಕ್ಷರು ಎ.ಪಿ.ಎಂ.ಸಿ. ಸಿಂಧನೂರ ಶ್ರೀ ವೀರಣ್ಣ ಸೋಮಲಾಪುರ ತಾಲೂಕು ಪಂಚಾಯತ್ ಸದಸ್ಯರು, ಶ್ರೀಮತಿ ಮಾಳಮ್ಮ ನಿರ್ದೇಶಕರು ಎ.ಪಿ.ಎಂ.ಸಿ., ಶ್ರೀ ಲಕ್ಷ್ಮೀಪತಿ ಗೊಬ್ಬರಕಲ್ ಕಾರ್ಯಕ್ರಮದಲ್ಲಿ ಭಾಗವಹಿಸಿ. ಸಂಸ್ಥೆಯ ಬೆಳವಣಿಗೆಗೆ ಎಲ್ಲರು ಸಹಕರಿಸುವುದಾಗಿ ತಿಳಿಸಿದರು.

**ರಾಯಚೂರು ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಸ್ವಾತಂತ್ರೋತ್ಸವ :** ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಜಿಲ್ಲಾ ಸಂಸ್ಥೆ ರಾಯಚೂರಿನ ಸ್ಕೌಟ್ಸ್ ಭವನದಲ್ಲಿ ಸ್ವಾತಂತ್ರೋತ್ಸವವನ್ನು ಆಚರಿಸಲಾಯಿತು. ಧ್ವಜಾರೋಹಣವನ್ನು ಶ್ರೀ ಕೆ. ತಿಮ್ಮಯ್ಯ. ಡಿ.ಸಿ.ಸಿ. ನೇರವೇರಿಸಿದರು. ಈ ಸಂದರ್ಭದಲ್ಲಿ ಶ್ರೀ ಖಾಜಾಹುಸೇನ್ ಎಂ. ಅನಾಹೊಸೂರ, ಡಿ.ಓ.ಸಿ.(ಎಸ್), ಶ್ರೀಮತಿ ಭುವನೇಶ್ವರಿ ಮೋಸ್, ಡಿ.ಓ.ಸಿ.(ಜಿ), ಶ್ರೀ ಹರೀಶ್ ಕುಮಾರ್ (ರಾಷ್ಟ್ರಪತಿ ವಿದ್ಯಾರ್ಥಿ) ಇದ್ದರು. ನಗರದ ಅನೇಕ ಸ್ಕೌಟ್ಸ್ ಗೈಡ್ಸ್‌ಗಳು ಭಾಗವಹಿಸಿದ್ದರು.

ಅಂದು ನಡೆದ ಸಾರ್ವಜನಿಕ ಕವಾಯಿತ್ ಪ್ರದರ್ಶನದಲ್ಲಿ ನವೋದಯ ಪಬ್ಲಿಕ್ ಶಾಲೆ ಉತ್ತಮ ಪ್ರದರ್ಶನಕ್ಕೆ ಶೀಲ್ಡನ್ನು ಪಡೆದುಕೊಂಡಿತು. ನಗರದ 15 ಶಾಲೆಗಳ ಸ್ಕೌಟ್ಸ್ ಗೈಡ್ಸ್, ಕಬ್ಸ್ ಬುಲ್‌ಬುಲ್‌ಗಳು ವಿದ್ಯಾರ್ಥಿಗಳು ಭಾಗವಹಿಸಿದ್ದರು.

## ಹಾವೇರಿ ಜಿಲ್ಲೆ

ದಿನಾಂಕ 29-08-2006 ರಂದು ಸ್ಕೌಟ್ ಮಾಸ್ಟರ್, ಕಬ್ ಮಾಸ್ಟರ್ ಮತ್ತು ಗೈಡ್ಸ್ ಕ್ಯಾಪ್ಟನ್ ಮತ್ತು ಫ್ಲಾಕ್ ಲೀಡರ್ಸ್‌ರವರ ಜಿಲ್ಲಾ ಮಟ್ಟದ ಸಮಾವೇಶ - ಗುರುಭವನ ಹಾವೇರಿ ಇಲ್ಲಿ ಶ್ರೀ ಪ್ರಭಾಕರ ರಾವ್ ಮಂಗಳೂರ, ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಸಂಸ್ಥೆ, ಹಾವೇರಿ ಇವರ ಅಧ್ಯಕ್ಷತೆಯಲ್ಲಿ ನಡೆಯಿತು.

ಶ್ರೀ ಡಿ.ವಿ. ಬೆಲ್ಲದ, ಉಪನಿರ್ದೇಶಕರು ಹಾಗೂ ಜಿಲ್ಲಾ ಸ್ಕೌಟ್ಸ್ ಕಮೀಷನರ್ ಸರ್ಕಾರಿ ಶಿಕ್ಷಣ ಇಲಾಖೆಯ ಹಾವೇರಿ ಇವರು ಉದ್ಘಾಟನೆ ಮಾಡಿದರು. ಶ್ರೀ ಮೊಗಲಿ ಶೆಟ್ಟರ ನಿವೃತ್ತ ಪ್ರಾಚಾರ್ಯರು ಅತಿಥಿಗಳಾಗಿದ್ದರು.

ಅತಿಥಿಗಳಾಗಿ ಶ್ರೀಮತಿ ಪ್ರೇಮಾ ಎಚ್.ಎಂ., ಬಿ.ಇ.ಓ., ಹಾವೇರಿ, ಶ್ರೀ ಟಿ. ವೆಂಕಟೇಶ್ ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, ಶ್ರೀ ಬಿ.ಎಂ. ಹಾವೇರಿ, ಶ್ರೀ ಕೆ.ಆರ್. ಕುಂಠೆ, ಪಿ.ಇ.ಓ., ಹಾವೇರಿ, ಶ್ರೀ ಕೆ.ಸಿ. ಕೋರಿ, ಜಿಲ್ಲಾ ಸ್ಥಾನಿಕ ಆಯುಕ್ತರು, ಶ್ರೀ ಆರ್.ಆರ್. ಕಾಶಪ್ಪನವರ ರೋಟರಿ ಕ್ಲಬ್ ಅಧ್ಯಕ್ಷರು ಭಾಗವಹಿಸಿದ್ದರು. ಸಮಾವೇಶದಲ್ಲಿ ನಿವೃತ್ತಿ ಹೊಂದಿದ ಶ್ರೀ ಪಿ.ಬಿ. ಮುದ್ದಿ ಮುಖ್ಯೋಪಾದ್ಯರು, ಎಂ.ಜಿ. ಹೈಸ್ಕೂಲ್ ಮತ್ತು ಜಿಲ್ಲಾ ಖಜಾಂಚಿ ಇವರಿಗೆ ಹಾಗೂ ಉತ್ತಮ ಗೈಡರ್ ರಾಜ್ಯ ಪ್ರಶಸ್ತಿ ಪಡೆದ ಶ್ರೀಮತಿ ಉಮಾ ಮರಿಗೆಂಚಣ್ಣನವರ ರವರನ್ನು ಸನ್ಮಾನಿಸಲಾಯಿತು. ಸಮಾವೇಶದಲ್ಲಿ ಸೇವಾ ಪದಕ ನೀಡಲಾಯಿತು. ಸಮಾವೇಶದಲ್ಲಿ 150 ಸ್ಕೌಟ್ಸ್ ಮಾಸ್ಟರ್, 20 ಕಬ್ ಮಾಸ್ಟರ್, 15 ಫ್ಲಾಕ್ ಲೀಡರ್, 65 ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು.

## ದಾವಣಗೆರೆ ಜಿಲ್ಲೆ

**ಶ್ರದ್ದಾಂಜಲಿ :** ದಿನಾಂಕ 29-8-2006 ರಂದು ಭಾರತ್ ಸ್ಕೌಟ್ಸ್ ಗೈಡ್ಸ್ ಜಿಲ್ಲಾ ಸಂಸ್ಥೆಯಲ್ಲಿ ಶ್ರೀಮತಿ ದಿ. ಉಷಾ ಡಾ॥ ಜಿನದತ್ತ, ಕೇಂದ್ರ ಸ್ಥಾನಿಕ ಆಯುಕ್ತರು ಇವರು ದೈವಾದೀನರಾದ ಪ್ರಯುಕ್ತ ಶ್ರದ್ದಾಂಜಲಿ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು.

ಶ್ರೀಮಹಮದ್ ವಾಸಿಲ್, ಶ್ರೀ ಮುರುಘ ರಾಜೇಂದ್ರ ಚಿಗಟೇರಿ, ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಶ್ರಿ ಜೆಂಬಗಿ ಶರಣಪ್ಪ ಹಾಗೂ ಶ್ರೀ ಅಥಣಿ ಕೋಟ್ರೇಶ್ ಮಾತನಾಡಿ ಮೃತರ ಆತ್ಮಕ್ಕೆ ಶಾಂತಿ ಕೋರಿ ಒಂದು ನಿಮಿಷ ಮೌನ ಆಚರಿಸಲಾಯಿತು.

***ಇವರು ಸಂಸ್ಥೆಗೆ ನೀಡಿರುವ 10,000/- ರೂಪಾಯಿಗಳ ಕೊಡುಗೆಯನ್ನು ಕೃತಜ್ಞತೆಯಿಂದ ಸ್ಮರಿಸಲಾಯಿತು.***

## ಚಿತ್ರದುರ್ಗ ಜಿಲ್ಲೆ

ದಿನಾಂಕ 24-07-2006 ರಂದು ಹಿರಿಯೂರಿನ ಸ್ಕೌಟರ್ಸ್, ಗೈಡರ್ಸ್‌ಗಳ ಸಮಾವೇಶವು ಅಸಂಷನ್ ಶಾಲೆಯಲ್ಲಿ ನಡೆಯಿತು. ಸಮಾರಂಭವು ಧ್ವಜರೋಹಣದ ಮೂಲಕ ಪ್ರಾರಂಭವಾಯಿತು. ಈ ಸಮಾರಂಭಕ್ಕೆ ಹಿರಿಯೂರಿನ ಪ್ರಮುಖ ಗಣ್ಯ ವ್ಯಕ್ತಿಗಳು ಆಗಮಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ಹಿರಿಯೂರಿನ ಸ್ಥಳೀಯ ಸಂಸ್ಥೆಯ ಸ್ಕೌಟ್ಸ್, ಗೈಡ್ಸ್‌ನ ಗೌರವ ಅಧ್ಯಕ್ಷರಾದ ಶ್ರೀಯುತ ದೊರೆಸ್ವಾಮಿ ಖಂಡರ್ ವಹಿಸಿದ್ದರು. ಈ ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ತಾಲ್ಲೂಕು ಪಂಚಾಯಿತಿ ಅಧ್ಯಕ್ಷರಾದ ರಂಗಸ್ವಾಮಿ, ಪುರಸಭೆಯ ಅಧ್ಯಕ್ಷರಾದ ಶ್ರೀ ಎ. ಮಂಜುನಾಥ, ತಾಲ್ಲೂಕು ದೈಹಿಕ ಶಿಕ್ಷಣದ ಸಂಯೋಜಕರಾದ ಶ್ರೀ ಕೆ. ರಂಗಪ್ಪ ಹಾಗೂ ಭಾರತ ಸೇವಾದಳದ ಪ್ರಧಾನ ಕಾರ್ಯದರ್ಶಿ ಶ್ರೀ ಬಾಲಕೃಷ್ಣ, ಅಸಂಷನ್ ಶಾಲೆಯ ವ್ಯವಸ್ಥಾಪಕನಾದ ಫಾದರ್॥ ಅಂತೋಣಿ ಪೀಟರ್, ಸ್ಥಳೀಯ ಸಂಸ್ಥೆಯ ಕೇಂದ್ರ ಆಯುಕ್ತರಾದ ಶ್ರೀಮತಿ ಶಶಿಕಲಾ ರವಿಶಂಕರ್, ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ನೂರುಲ್ಲ ಹಾಗೂ ಸ್ಕೌಟ್ಸ್, ಗೈಡ್ಸ್ ಸ್ಥಾನಿಕ ಕಮೀಷನರ್ ಆದ ಶ್ರೀ ಮಹಮದ್ ಮೈನುದ್ದೀನ್ ಇನ್ನೂ ಅನೇಕ ಸ್ಕೌಟರ್ಸ್, ಗೈಡರ್ಸ್‌ಗಳು ಕಮೀಷನರ್‌ಗಳು ಆಗಮಿಸಿದ್ದರು.

## ಬಾಗಲಕೋಟೆ ಜಿಲ್ಲೆ

ದಿನಾಂಕ 12-08-2006 ರಂದು ಬದಾಮಿ ತಾಲೂಕಿನ ಪ್ರಥಮಿಕ ಹಾಗೂ ಪ್ರೌಢಶಾಲೆಗಳ ಮುಖ್ಯಗುರುಗಳಿಗೆ ಒಂದು ದಿನದ ಸ್ಕೌಟಿಂಗ್ ಸಾಮಾನ್ಯ ಜ್ಞಾನ ಮಾಹಿತಿ ಶಿಬಿರ ಶ್ರೀ ಅಕ್ಕಮಹಾದೇವಿ ಕಲ್ಯಾಣ ಮಂಟಪ ಬದಾಮಿಯಲ್ಲಿ ನಡೆಯಿತು. 250 ಜನ ಮುಖ್ಯ ಗುರುಗಳು ಆಗಮಿಸಿದ್ದರು. ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಎ.ಸಿ. ಪಟ್ಟಣದ, ಛೇರ್ಮನ್ ವೀರಪುಲಿಕೇಶಿ ವಿದ್ಯಾವರ್ಧಕ ಸಂಘ ಬದಾಮಿ ಇವರು ಉದ್ಘಾಟಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಜಿ.ಡಿ. ದಾಸರ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಆಯುಕ್ತರಾದ ಜಿ.ಬಿ. ಇದ್ದಲಗಿ ಕಾರ್ಯದರ್ಶಿ ಸಿ.ಎ. ಸಾವಳಿಗಿ, ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಬಿ.ಎಸ್. ಕೆರೂರ ಮಾತನಾಡಿದರು.

ಶ್ರೀ ಜಿ.ಎ. ನರಗುಂದ, ಎಲ್.ಟಿ.(ಸ್ಕೌ) ಹಾಗೂ ಶ್ರೀ ಎಸ್.ಆರ್. ಪಾಟೀಲ, ಎಚ್.ಡಬ್ಲ್ಯೂ.ಬಿ.,

ಶ್ರೀ ಎಸ್.ಎಸ್. ನಾರಾ, ಎ.ಎಲ್.ಟಿ.(ಎಸ್), ಎನ್.ಎಮ್. ಅಗಸಿ ಮುಂದಿನ, ಶ್ರೀಮತಿ ಪಿ.ಜಿ. ಬಂದಿಕೇರಿ, ಡಿ.ಓ.ಸಿ(ಜಿ) ಇವರು ಉಪನ್ಯಾಸ ನೀಡಿದರು. ಬಿ.ಇ.ಓ. ಕಾರ್ಯಾಲಯದ ಶಿಕ್ಷಣ ಸಂಯೋಜಕರಾದ ಕೆ.ಪಿ. ಅರಿಷಿಣಗೋಡಿ ಸ್ವಾಗತಿಸಿದರು. ಜಿ.ಪಿ. ಹಿರೇಮಠ ವಂದಿಸಿದರು. ಸ್ಕೌಟ್ಸ್ ಡಿ.ಓ.ಸಿ., ಶ್ರೀ ಸಿ.ಎ. ಸಣ್ಣಪ್ಪನವರ್ ಕಾರ್ಯಕ್ರಮ ನಿರೂಪಿಸಿದರು.

## ಸ್ಕೌಟ್ ಮೂಲ ಹಾಗೂ ಮುಂದುವರೆದ ತರಬೇತಿ ಹಾಗೂ ಗೈಡ್ ಕ್ಯಾಪ್ಟನ್ ಮೂಲ ತರಬೇತಿ ಶಿಬಿರ :

ದಿನಾಂಕ : 29.8.2006 ರಿಂದ 7.8.2006ರ ವರೆಗೆ ಬದಾಮಿ ತಾಲೂಕಿನ ಶ್ರೀ ಮಹಾಕೂಟೇಶ್ವರ ದೇವಸ್ಥಾನದಲ್ಲಿ ತರಬೇತಿ ಶಿಬಿರಗಳ ನಡೆದವು. ತರಬೇತಿಯಲ್ಲಿ ಈ ಕೆಳಗಿನಂತೆ ಶಿಕ್ಷಕ / ಕಿಯವರು ಭಾಗವಹಿಸಿ ತರಬೇತಿಯನ್ನು ಪಡೆದರು.

**ಮೂಲ ತರಬೇತಿ (ಎಸ್)** - ದಿನಾಂಕ 29.08.2006 ರಿಂದ 07.09.2006ರ ವರೆಗೆ 52 ಮಂದಿ ಭಾಗವಹಿಸಿದ್ದರು. ಶ್ರೀ ಡಿ. ಬಸವರಾಜು, ಎಲ್.ಟಿ. (ಸ್ಕೌಟ್ಸ್) ಮತ್ತು ಶ್ರೀ ವಾಮದೇವಪ್ಪ, ಎ.ಎಲ್.ಟಿ. ನಾಯಕರಾಗಿದ್ದರು.

**ಮುಂದುವರೆದ ತರಬೇತಿ (ಎಸ್)** - ದಿನಾಂಕ 31.08.2006 ರಿಂದ 07.09.2006ರ ವರೆಗೆ 29 ಮಂದಿ ಭಾಗವಹಿಸಿದ್ದರು. ಶ್ರೀ ಜಿ.ಎ. ನರಗುಂದ, ಎಲ್.ಟಿ. (ಸ್ಕೌಟ್) ಶಿಬಿರದ ನಾಯಕರಾಗಿದ್ದರು.

**ಮೂಲ ತರಬೇತಿ ಗೈಡ್ ಕ್ಯಾಪ್ಟನ್** - 01-09-2006 ರಿಂದ 07-09-2006ರ ವರೆಗೆ 27 ಮಂದಿ ಭಾಗವಹಿಸಿದ್ದರು. ಸುಷ್ಮಾ ಗುಡ್ಡದ ನಾಯಕಿಯರಾಗಿದ್ದರು.

ಶಿಬಿರದ ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ಶಾಸಕರಾದ ಎಂ.ಕೆ. ಪಟ್ಟಣಶೆಟ್ಟಿ ವಹಿಸಿ ಸ್ಕೌಟ್ ಚಳುವಳಿ ಮೂಲಕ ಮಾನವೀಯ ಮೌಲ್ಯ ಬೆಳೆಸಲು ಕರೆ ನೀಡಿದರು. ಜಿಲ್ಲಾ ಸಂಸ್ಥೆ ಅಧ್ಯಕ್ಷರು ವಿಧಾನ ಪರಿಷತ್ ಸದಸ್ಯರಾದ ಶ್ರೀ ಎಸ್.ಆರ್. ಪಾಟೀಲ ಆಗಮಿಸಿ ಸ್ಕೌಟ್ ಚಳುವಳಿ ಮೂಲಕ ಮಕ್ಕಳನ್ನು ಸತ್ಪ್ರಜೆಗಳನ್ನಾಗಿ ಮಾಡಲು ಕರೆ ನೀಡಿದರು. ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಉಪನಿರ್ದೇಶಕರಾದ ಶ್ರೀ ಎಸ್.ಆರ್. ಮನಹಳ್ಳಿ ತರಬೇತಿಯ ಅನುಭವವನ್ನು ತರಗತಿಯಲ್ಲಿ ಮಕ್ಕಳಿಗೆ ನೀಡಿ ಘಟಕಗಳನ್ನು ರಚಿಸಲು ಕರೆ ನೀಡಿದರು. ಪಿ.ಎಲ್.ಡಿ. ಬ್ಯಾಂಕ್ ಅಧ್ಯಕ್ಷರಾದ ಶ್ರೀ ಮಹಾಂತೇಶ ಮಮದಾಪೂರ ಮಾತನಾಡಿದರು. ಶ್ರೀ ಜಿ.ಬಿ. ಇದ್ದಲಗಿ ಸ್ಕೌಟ್ಸ್ ಆಯುಕ್ತರು ಹಾಗೂ ಕಾರ್ಯದರ್ಶಿ ಶ್ರೀ ಸಿ.ಎ. ಸಾವಳಗಿ ಮಾತನಾಡಿದರು. ಸ್ಕೌಟ್ ಡಿ.ಓ.ಸಿ., ಶ್ರೀ ಸಿ.ಎ. ಸಣ್ಣಪ್ಪನವರ ಕಾರ್ಯಕ್ರಮ ನಿರೂಪಿಸಿದರು. ಹಾಗೂ ಎನ್.ಎಮ್. ಅಗಸಿ ಮುಂದಿನ ಸ್ವಾಗತಿಸಿದರು. ಗೈಡ್ ಡಿ.ಓ.ಸಿ. (ಗೈಡ್ಸ್), ಶ್ರೀಮತಿ ಪಿ.ಜಿ. ಬಂದೀಕೇರಿ ವಂದಿಸಿದರು.

ಶ್ರೀ ವೀರಪುಲಿಕೇಶಿ ಕೋ-ಆಪರೇಟಿವ್ ಬ್ಯಾಂಕ್ ಬದಾಮಿ ಇವರ ಸವಿನೆನಪಿನ ಕಾಣಿಕೆಗಳನ್ನು ನೀಡಿದರು. ಬಿ.ಎಸ್. ಕೆರೂರ ಆರ್.ಎಮ್. ಸಾರವಾಡ, ಶ್ರೀ ವೈ.ಎಫ್. ಶರೀಫ್, ಎನ್.ಎಮ್. ಹೆಳವರ, ವಿ.ಎನ್. ಗಂಗಲ್, ಮರಿಯಣ್ಣನವರ ಹಾಗೂ ಇತರರು ಶಿಬಿರದ ವ್ಯವಸ್ಥೆ ಮಾಡಿದ್ದರು.

ಜಿಲ್ಲಾ ತರಬೇತಿ ಸಂಸ್ಥೆ ಇಲಕಲ್‌ನ ಪ್ರಾಚಾರ್ಯರು ಹಾಗೂ ಸ್ಕೌಟ್ ಆಯುಕ್ತರಾದ ಶ್ರೀ ಬಿ.ಟಿ. ಬೆಟಗೇರಿ ಶಿಬಿರಕ್ಕೆ ಆಗಮಿಸಿ ಅಭ್ಯರ್ಥಿಗಳಿಗೆ ಹಿತವಚನ ನೀಡಿದರು. ದೈಹಿಕ ಶಿಕ್ಷಣ ಸಂಯೋಜಕರಾದ ಶ್ರೀ ಕೆ.ಪಿ. ಅರಿಷಿಣಗೋಡಿ ಶಿಬಿರಕ್ಕೆ ಭೇಟಿ ನೀಡಿದರು.

**ಭಾರತದ ಪ್ರತಿಯೊಂದು ಮನೆಯಲ್ಲೂ ಸ್ಕೌಟ್ ಮತ್ತು ಗೈಡ್‌ಗಳಂತಹ ಮಕ್ಕಳಿರಬೇಕೆಂದು ನಾನು ಅಪೇಕ್ಷಿಸುತ್ತೇನೆ - ಮಹಾತ್ಮ ಗಾಂಧಿ ನನ್ನ ದೃಷ್ಟಿಯಲ್ಲಿ ಸ್ಕೌಟ್ ಮತ್ತು ಗೈಡ್‌ಗಳು ಅತ್ಯುತ್ತಮ ಆಸ್ತಿ. ಅವರು ಹೆಚ್ಚು ವಿಕಾಸಗೊಂಡಷ್ಟು ರಾಷ್ಟ್ರಕ್ಕೆ ಹೆಚ್ಚು ಒಳಿತಾಗುತ್ತದೆ.**

**- ಜವಹರಲಾಲ್ ನೆಹರು**

ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ, ಬೆಂಗಳೂರು-1

ಸಂಖ್ಯೆ: ದೈಶಿ4(2) ಭಾ.ಸ್ಕೌ.ಗೈ.10:97-98 ದಿನಾಂಕ: 19-09-2006

-: ಸುತ್ತೋಲೆ :-

ವಿಷಯ: ಭಾರತ್ ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಸ್ಕೌಟ್ ಮತ್ತು ಗೈಡ್ಸ್ ಚಟುವಟಿಕೆಗಳನ್ನು ರಾಜ್ಯದ ಎಲ್ಲಾ ಶಾಲೆಗಳಲ್ಲಿ ವಿಸ್ತರಿಸುವ ಹಾಗು ವಾರ್ಷಿಕ ನೊಂದಣಿ ಶುಲ್ಕವನ್ನು ವಸೂಲಿ ಮಾಡುವ ಬಗ್ಗೆ

ಉಲ್ಲೇಖ: 1. ಈ ಕಛೇರಿಯ ಸಮ ಸುತ್ತೋಲೆ ಪತ್ರ ದಿನಾಂಕ:26-05-2004 ಮತ್ತು 14-06-2005

2. ರಾಜ್ಯ ಮುಖ್ಯ ಆಯುಕ್ತರು, ಭಾರತ ಸ್ಕೌ.ಗೈ. ರವರ ಪತ್ರ ಸಂಖ್ಯೆ: 878/2006-07 ದಿನಾಂಕ: 13-09-2006

-0-

ರಾಜ್ಯದ ಮುಖ್ಯ ಆಯುಕ್ತರು, ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಚಟುವಟಿಕೆಗಳನ್ನು ರಾಜ್ಯದ ಎಲ್ಲಾ ಶಾಲೆಗಳಲ್ಲಿ ಹೆಚ್ಚಿಸಲು ಮತ್ತು ಈ ಸಂಸ್ಥೆಯ ಘಟಕಗಳು ಕಾರ್ಯ ನಿರ್ವಹಿಸುತ್ತಿರುವ ಶಾಲಾ ಮಕ್ಕಳಿಂದ ತಲಾ ರೂ.5.00 (ರೂ.ಐದು ಮಾತ್ರ) ಗಳನ್ನು ಸ್ಕೌಟ್ಸ್ ಮತ್ತು ಗೈಡ್ಸ್ ನಿಧಿಗೆ ಎಲ್ಲಾ ಮಕ್ಕಳಿಂದ ಪಡೆಯುವ ಕುರಿತು ಹಾಗು ಸಂಬಂಧಿಸಿದ ಶಿಕ್ಷಕರುಗಳನ್ನು ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗಳು ಹಮ್ಮಿಕೊಂಡ ವಿವಿಧ ತರಬೇತಿಗಳಿಗೆ ನಿಯೋಜಿಸಲು ಉಲ್ಲೇಖ (2) ರ ಪತ್ರದಲ್ಲಿ ಕೋರಿರುತ್ತಾರೆ.

ಸದರಿಯವರ ಮನವಿಯನ್ನು ಪರಿಗಣಿಸಿ ರಾಜ್ಯದ ಎಲ್ಲಾ ಶಾಲೆಗಳಲ್ಲಿ ಸ್ಕೌಟ್ ಮತ್ತು ಗೈಡ್ಸ್ ಕಾರ್ಯಚಟುವಟಿಕೆಗಳನ್ನು ವಿಸ್ತರಿಸಿ ಕ್ರಮ ಕೈಗೊಳ್ಳುವ ಬಗ್ಗೆ ಈ ಕೆಳಕಂಡಂತೆ ಆದೇಶಿಸಿದೆ.

"ರಾಜ್ಯದ ಯಾವ ಶಾಲೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ವಿವಿಧ ಹಂತದ ದಳಗಳನ್ನು ಪ್ರಾರಂಭಿಸಿ ತರಬೇತಿಗಾಗಿ ಶಿಕ್ಷಕರನ್ನು ನಿಯೋಜಿಸಲು ಹಾಗೂ ಎಲ್ಲೆಲ್ಲಿ ಕಬ್, ಬುಲ್ ಬುಲ್, ಗೈಡ್ ಘಟಕಗಳನ್ನು ಪ್ರಾರಂಭಿಸಲು ಸಿದ್ಧತೆ ಮಾಡಲಾಗಿದೆಯೋ ಅಂತಹ ಶಾಲೆಯ ಎಲ್ಲಾ ವಿದ್ಯಾರ್ಥಿಗಳಿಂದ ಸ್ಕೌಟ್ಸ್ ಮತ್ತು ಗೈಡ್ಸ್ ನಿಧಿಗೆ ರೂ.5.00 ಗಳನ್ನು ವಾರ್ಷಿಕ ವಂತಿಕೆಯಾಗಿ ಕಡ್ಡಾಯವಾಗಿ ವಸೂಲು ಮಾಡಲು ಈ ಮೂಲಕ ಅನುಮತಿ ನೀಡಲಾಗಿದೆ."

<u>ಮಾರ್ಗಸೂಚಿ</u>: ವಿದ್ಯಾರ್ಥಿಗಳಿಂದ ವಸೂಲಿ ಮಾಡಿದ ಹಣವನ್ನು ಸಂಬಂಧಿಸಿದ ಶಾಲೆಯ ಮುಖ್ಯ ಶಿಕ್ಷಕರು ತಮ್ಮ ಬ್ಯಾಂಕ್ ಖಾತೆಯ ' ನಾನ್ ಗೌರ್ನಮೆಂಟ್ ಫಂಡ್ ' ನಲ್ಲಿ ಇರಿಸಿಕೊಂಡು ಇದಕ್ಕೆ ಸಂಬಂಧಿಸಿದ ದಾಖಲೆಗಳೊಂದಿಗೆ ಸಂಗ್ರಹಿತ ಈ ಹಣವನ್ನು ಸದರಿ ಚಟುವಟಿಕೆಗಳಿಗೆ ಮಾತ್ರ ವಿನಿಯೋಗಿಸುವುದು.

ನಿರ್ದೇಶಕರು(ಪ್ರೌಢ ಶಿಕ್ಷಣ)

ಗೆ,

1. ರಾಜ್ಯ ಮುಖ್ಯ ಆಯುಕ್ತರು, ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಕೊಂಡಜ್ಜಿ ಬಸಪ್ಪ ರಸ್ತೆ, ಕೋಟೆ, ಬೆಂಗಳೂರು-2 ಇವರ ಮಾಹಿತಿ ಹಾಗು ಮುಂದಿನ ಕ್ರಮಕ್ಕಾಗಿ
2. ರಾಜ್ಯದ ಎಲ್ಲಾ ಜಿಲ್ಲಾ ಉಪನಿರ್ದೇಶಕರುಗಳಿಗೆ
3. ರಾಜ್ಯದ ಎಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರುಗಳಿಗೆ
4. ರಾಜ್ಯದ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ
5. ಕಛೇರಿ ಪ್ರತಿ

# ಆಕಾಶ ನೋಡಲೂ ನೂಕು ನುಗ್ಗಲೇ?

## ಭೂಮಿಯ ಸುಮಾರು ಮುಕ್ಕಾಲು ಭಾಗವನ್ನು ನೀರೇ ಆವರಿಸಿಕೊಂಡಿದೆಯಲ್ಲವೆ? ಅದಕ್ಕಾಗಿ ಭೂಮಿಯನ್ನು 'ನೀರಿನ ಗೃಹ' ಎಂದು ಕರೆಯುತ್ತಾರೆ.

ನಮ್ಮ ಈ ಎಲ್ಲ ಅಜಾಗರೂಕತೆ, ನಿರ್ಲಕ್ಷ್ಯ, ದರ್ಪ, ಅಹಂಕಾರ ಮತ್ತು ಅಜ್ಞಾನದ ಪರಿಣಾಮವನ್ನು ನಾವೀಗ ಅನುಭವಿಸುತ್ತಿದ್ದೇವೆ. ನಮ್ಮ ಅನೇಕ ನೀರಿನ ಮೂಲಗಳೀಗ ಅಪಾಯದ ಅಂಚಿನಲ್ಲಿವೆ. ಕೆಲವು ಕಡೆ ಅಂತರ್ಜಲ ನಮ್ಮ ಕೈಗೆ ಸಿಗದಷ್ಟು ಕೆಳಗೆ ಕುಸಿದು ಬಿಟ್ಟಿದೆ. ಕೆಲವು ನದಿಗಳು ಉಪಯೋಗಿಸಲಾರದಷ್ಟು ಮಲಿನಗೊಂಡಿದ್ದರೆ, ಇನ್ನು ಕೆಲವು ನದಿಗಳ ಜಲಮಟ್ಟ ಗಣನೀಯವಾಗಿ ಕುಸಿದುಹೋಗಿದೆ. ಎಷ್ಟೋ ಕೆರೆಗಳು ನಾಶವಾಗಿಹೋಗಿವೆ. ಹಲವು ಕೆರೆಗಳಲ್ಲಿ ಹೂಳು ತುಂಬಿ ಉಪಯೋಗಕ್ಕೆ ಬಾ ರದಂತಾಗಿವೆ. ಜತೆಗೆ ನಮ್ಮ ಕೆರೆ-ಕಾಲುವೆಗಳಿಗೆ ನಿರ್ದಾಕ್ಷಿಣ್ಯವಾಗಿ ಮಲಿನಕಾರಿಗಳನ್ನು ಸೇರಿಸಿ ಅವುಗಳನ್ನು ಒಳಚರಂಡಿಗಳನ್ನಾಗಿ ಮಾಡುತ್ತಿದ್ದೇವೆ.

ಇದೆಲ್ಲದರ ಪರಿಣಾಮವೇ "ಕುಡಿಯುವ ನೀರಿನ ಸಮಸ್ಯೆ" ಎನ್ನುವ ಬ್ರಹ್ಮರಾಕ್ಷಸ ನಮ್ಮನ್ನು ಕಾಡುತ್ತಿರುವುದು.

ಶುದ್ಧವಾದ ಕುಡಿಯುವ ನೀರು ನಿಯಮಿತ ಸಂಪನ್ಮೂಲ ಎನ್ನುವುದನ್ನು ಅರಿಯದೆ, ನೀರನ್ನು ಅವೈಜ್ಞಾನಿಕವಾಗಿ ಖರ್ಚು ಮಾಡಿದ್ದು ಇಂದಿನ ನೀರಿನ ಸಮಸ್ಯೆಗೆ ಪ್ರಮುಖ ಕಾರಣವಾದರೆ, ಇನ್ನೊಂದು ಪ್ರಮುಖ ಸಮಸ್ಯೆ ಏರುತ್ತಿರುವ ಜನಸಂಖ್ಯೆ.

ದಿನದಿಂದ ದಿನಕ್ಕೆ ಜನಸಂಖ್ಯೆ ಎರ್‍ರಾಬಿರ್‍ರಿ ಏರುತ್ತಿದೆ. 1900ರಲ್ಲಿ ಜಗತ್ತಿನ ಜನಸಂಖ್ಯೆ 1.6 ಬಿಲಿಯನ್ ಇತ್ತು. 2000ರ ವೇಳೆಗೆ ಇದರ ಪ್ರಮಾಣ 6 ಬಿಲಿಯನ್‌ಗೆ ಏರಿತು. ಇದೇ ಪ್ರಮಾಣದಲ್ಲಿ ಏರುತ್ತಾ ಹೋದರೆ 2025ರ ವೇಳೆಗೆ ನಮ್ಮ ಜನ ಸಂಖ್ಯೆ 8 ಬಿಲಿಯನ್ ಆಗುತ್ತದೆ. ಜನಸಂಖ್ಯೆ ಏರಿದ ಹಾಗೇ ಕುಡಿಯುವ ನೀರಿನ ಅಗತ್ಯವೂ ಹೆಚ್ಚುತ್ತಿದೆ. ಏರುತ್ತಿರುವ ಜನಸಂಖ್ಯೆಗೆ ಅನುಗುಣವಾಗಿ ನೀರಿನ ಸಂಪನ್ಮೂಲವೇನೂ ಹೆಚ್ಚುತ್ತಿಲ್ಲ. ಜನಸಂಖ್ಯೆ ಎಷ್ಟೇ ಏರಿದರೂ ಭೂಮಿಯ ಮೇಲಿನ ನೀರಿನ ಪ್ರಮಾಣ ಹೆಚ್ಚಲು ಸಾಧ್ಯವೇ ಎಲ್ಲ. ವಿಪರ್ಯಾಸವೆಂದರೆ, ಒಂದು ಕಡೆ ಜನಸಂಖ್ಯೆ ಏರುತ್ತಿದ್ದರೆ, ಇನ್ನೊಂದು ಕಡೆ ಶುದ್ಧವಾದ ನೀರಿನ ಪ್ರಮಾಣ ಕಡಿಮೆಯಾಗುತ್ತಿದೆ. ಅಂದ ಮೇಲೆ ನೀರಿನ ಸಮಸ್ಯೆ ನಮ್ಮನ್ನು ಕಾಡದೆ ಇನ್ನೇನಾದೀತು?

ಹಾಗಾದರೆ, ಈ ನೀರಿನ ಸಮಸ್ಯೆಗೆ ಪರಿಹಾರ ಕಂಡು ಹಿಡಿಯುವುದು ಸಾಧ್ಯವಿಲ್ಲವೆ?

ಸಾಧ್ಯವಿದೆ. ಎಷ್ಟಾದರೂ ಬುದ್ಧಿವಂತ ಜೀವಿಗಳು ನಾವು. ಉಳಿದೆಲ್ಲಾ ಜೀವಿಗಳಿಗಿಂತ ನಾವು ವಿಶೇಷ ಎನ್ನಿಸಿರುವುದೇ ನಮ್ಮಲ್ಲಿರುವ ಬುದ್ದಿವಂತಿಕೆಯಿಂದ, ನೀರನ್ನು ಜಾಣ್ಮೆಯಿಂದ ಬಳಸಿ ಈ ಅಮೂಲ್ಯ ಸಂಪತ್ತನ್ನು ಯಾವಾಗಲೂ ಕಾಪಾಡುವುದು ನಮ್ಮ ಜಾಣ್ಮೆಗೆ ನಿಲುಕದ ವಿಷಯವೇನಲ್ಲ. ನಾವು ಪ್ರಜ್ಞೆಯಿಂದ ಮತ್ತು ಜಾಣ್ಮೆಯಿಂದ ನೀರನ್ನು ಬಳಸಿದರೆ ಖಂಡಿತವಾಗಿಯೂ ಈ ಸಂಪತ್ತನ್ನು ರಕ್ಷಿಸಿಕೊಳ್ಳಬಹುದು.

ಈ ನಿಟ್ಟಿನಲ್ಲಿ ನಾವು ಈಗಾಗಲೇ ಕಾರ್ಯಗತವಾಗುವುದು ಅವಶ್ಯವಿದೆ. ಮೊದಲೇ ಹೇಳಿದಂತೆ ನೀರು ಒಂದು ನೈಸರ್ಗಿಕ ಸಂಪನ್ಮೂಲ. ಎಲ್ಲರೂ ಉಚಿತವಾಗಿ, ಶುದ್ಧವಾಗಿ, ಬಯಸುವ ವಸ್ತು, ನೀರಿಗಾಗಿ ಪರದಾಡುವ, ನೀರಿಗಾಗಿ ಹೊಡೆದಾಡುವ ಅಥವಾ ನೀರನ್ನು ದುಬಾರಿ ಬೆಲೆ ತೆತ್ತು ಕೊಂಡುಕೊಳ್ಳುವ ಪರಿಸ್ಥಿತಿಯನ್ನು ನಾವು ತಂದುಕೊಂಡರೆ ಅದು ನಮ್ಮ ದುರಾಷ್ಟವಷ್ಟೇ ಅಲ್ಲ, ನಾವು ಪ್ರಕೃತಿಯ ನಿಯಮಕ್ಕೆ ಮಾಡುವ ಮೋಸವೂ ಹೌದು. ಆದ್ದರಿಂದ ನಾವು ನಿಸರ್ಗದ ನಿಯಮವನ್ನು ಪಾಲಿಸಬೇಕು. ಪ್ರಜ್ಞೆಯಿಂದ ಮತ್ತು ಮಿತವಾಗಿ ನೀರನ್ನು ಬಳಸಿ, ಇತರರೂ ಸಹ ಬಳಸಲು ನೀರು ಉಳಿಸಬೇಕು. ಮುಖ್ಯವಾಗಿ ನಮ್ಮ ಮುಂದಿನ ಪೀಳಿಗೆಯವರಿಗೂ ಸಹ ಶುದ್ಧ ನೀರು ಹೇರಳವಾಗಿ ಸಿಗುವಂತೆ ನಾವು ನೋಡಿಕೊಳ್ಳಬೇಕು.

ಆಕಾಶ ನೋಡಲೂ ಸಹ ನೂಕು ನುಗ್ಗಲು ಇರಬಾರದು, ಅಲ್ಲವೆ?

ಕೃಪೆ : 'ಇದು ನೀರಿನ ಕಥೆ' - ಇಕೋ ವಾಚ್

## ಪೋಷಕರಿಗೆ ಸಂದೇಶ

**ನಿಮ್ಮ ಹುಡುಗ / ಹುಡುಗಿ ಸ್ಕೌಟ್ / ಗೈಡ್ ಆಗಬೇಕು. ಏಕೆಂದರೆ,**

1. ಸ್ಕೌಟ್ / ಗೈಡ್ ಶಿಕ್ಷಣವು - ನಿಮ್ಮ ಹುಡುಗ / ಹುಡುಗಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಮಾಡುತ್ತದೆ.

2. ಸ್ಕೌಟ್ / ಗೈಡ್ ಶಿಕ್ಷಣವು - ಹುಡುಗ / ಹುಡುಗಿಯರ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುವುದಲ್ಲದೆ ಅವರ ಯಾವುದೇ ವೃತ್ತಿಯಲ್ಲಿ ಯಶಸ್ಸನ್ನು ಕೊಡುವುದು.

3. ಸ್ಕೌಟ್ / ಗೈಡ್ - ಇದು ಸೈನಿಕ ಚಳವಳಿಯಲ್ಲ. ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸಹೊರಟಿದ್ದೇವೆಯೇ ವಿನಃ ಅನುಕರಣೆಯ ಸಿಪಾಯಿಗಳ ಒಂದು ತಂಡವನ್ನಲ್ಲ.

4. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.

5. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತವೆ.

6. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.

7. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.

8. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಆರೋಗ್ಯ ತಂದುಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸನ್ನು ಗಳಿಸುತ್ತಾರೆ.

9. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ. ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.

10. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಗೆ ಸಂತೋಷ ನೀಡುತ್ತದೆ. ಹರ್ಷೋತ್ಸಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.

11. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ಸುಸಂಸ್ಕೃತ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟುಕೊಂಡಿವೆ.

12. ಸ್ಕೌಟ್ / ಗೈಡ್ - ನಿಮ್ಮ ಹುಡುಗ / ಹುಡುಗಿಯನ್ನು ಯೋಗ್ಯ ವ್ಯಕ್ತಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.



29-08-2006ರಂದು ಹಾವೇರಿಯಲ್ಲಿ ನಡೆದ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕ ಶಿಕ್ಷಕಿಯರ ಸಮಾವೇಶವನ್ನು ಶ್ರೀ. ಡಿ.ವಿ. ಬೆಲ್ಲದ್, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಶ್ರೀ ಪ್ರಭಾಕರರಾವ್ ಮಂಗಳೂರ್, ಜಿಲ್ಲಾ ಮುಖ್ಯ ಆಯುಕ್ತರು, ರೋಟರಿಯನ್ ಶ್ರೀ ಆರ್. ಆರ್. ಕಾಶಪ್ಪನವರ್ ಹಾಗು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳನ್ನು ಕಾಣಬಹುದು.



ಬೆಳಗಾಂ ಜಿಲ್ಲೆ ಸುರಬಾನ ಶ್ರೀ ಫಲಾಹಾರ ಶಿವಭೋಗೀಶ್ವರ ಪ್ರೌಢಶಾಲೆಯಲ್ಲಿ ನಡೆದ ಕಾರ್ಯಕ್ರಮದಲ್ಲಿ ಸ್ಕೌಟ್ಸ್‌ಗಳು



ಹಾಸನದಲ್ಲಿ ಸ್ವಾತಂತ್ರ ದಿನಾಚಾರಣೆ ಅಂಗವಾಗಿ ನಡೆದ ಪಥಸಂಚಲನ ಕಾರ್ಯಕ್ರಮದಲ್ಲಿ ಪ್ರಥಮ ಬಹುಮಾನ ಪಡೆದ ಶ್ರೀ ಆದಿಚುಂಚನಗಿರಿ ಆಂಗ್ಲ ಶಾಲೆಯ ಸ್ಕೌಟ್ಸ್ ತಂಡದೊಂದಿಗೆ ಶಾಲೆಯ ಮುಖ್ಯಸ್ಥರು ಹಾಗೂ ಸ್ಕೌಟ್ ಶಿಕ್ಷಕರಿದ್ದಾರೆ.



ವಿಜಾಪುರ ಜಿಲ್ಲಾ ಮುದ್ದೇಬಿಹಾಳ ತಾ॥ ಇಂಗಳಗೇರಿಯ ಸರ್ಕಾರಿ ಪ್ರೌಢಶಾಲೆಯಲ್ಲಿ ನಡೆದ ಧ್ವಜಾರೋಹಣ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು.



ಶ್ರೀ ಹಂಪನಗೌಡ ಬಾಡರಳ್ಳಿ, ಎಂ.ಎಲ್.ಎ. ಸಿಂದನೂರು ಕ್ಷೇತ್ರ ಅವರು ದಿನಾಂಕ 19-08-2006ರಂದು ಅಂಬಾ ಮಠದಲ್ಲಿ ನಡೆದ ತರಬೇತಿ ಶಿಬಿರವನ್ನು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಶಿಕ್ಷಣ ಇಲಾಖೆ ಮತ್ತು ರಾಯಚೂರು ಜಿಲ್ಲೆಯ ಗಣ್ಯರನ್ನು ಕಾಣಬಹುದು.









## 100 — 2007

**A Hundred years of Promise**

**Scouting will celebrate its Centenary in 2007**

**I pray that every home in India may have children like Scouts & Guides.**

- Mahatma Gandhi



**I think the Scouts/Guides are excellent material and the more they expand, the better for the Country.**

- Jawaharlal Nehru

YOUR SUPPORT WILL HELP US TO REACH OUR GOAL




Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: **WPP-87** of SSP, BANGALORE WEST
Posted at: Bangalore City H.P.O. on 30-09-2006





**If not delivered please return to :**


**EDITOR, Karnataka Scout & Guide**
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227.


SRI.KONDAJJI B.SHANMUKHAPPA
State Chief Commissioner
Bharat Scouts and Guides, Karnataka
'Nagashree', # 23, 14th 'A' Cross,
2nd Stage, 2nd Phase,
West of Chord Road, Mahalakshmipuram,
Bangalore-560086.


***Published for :*** The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.